**VOLUME XI**



ಸಂಚಿಕೆ ೧೧

॥ ಶ್ರೀ ಮಧ್ವನಾಥೋ ವಿಜಯತೇ ॥

ಶ್ರೀಮನ್ಮಧ್ವಾಚಾರ್ಯರ

ಸರ್ವ ಮೂಲಗ್ರಂಥಗಳ ಮಾಲಿಕೆಯ ಏಕಾದಶ ಗುಚ್ಛದಲ್ಲಿ

ಒಂದನೇಯ ಗ್ರಂಥವಾದ

# ಋಗ್ಭಾಷ್ಯ

ದ್ವೈತವೇದಾಂತ ವಿದ್ವಾನ್, ದ್ವೈತವೇದಾಂತ ಶಿರೋಮಣಿ,
ಶ್ರೀಮನ್ಮಧ್ವಸಿದ್ಧಾಂತ ಪ್ರಬೋಧಿನೀ ಸಂಸ್ಕೃತ ಮಹಾಪಾಠಶಾಲಾ ನಿವೃತ್ತ ಪ್ರಧಾನ ಪಂಡಿತ
ಉಡುಪಿ ಆಯುರ್ವೇದ ಕಾಲೇಜಿನ ನಿವೃತ್ತ ಪ್ರೊಫೆಸರ್, ವೇದಾಂತ ವಾಚಸ್ಪತಿ
**ಶ್ರೀ ಅಗ್ರಹಾರ ನಾರಾಯಣ ತಂತ್ರಿಗಳಿಂದ ವಿರಚಿತವಾದ**

ಕನ್ನಡ ಟೀಕಾ ಭಾಷಾಂತರ ಸಹಿತ.

ಶ್ರೀ ೧೦೮ ಶ್ರೀ ಪರಮಹಂಸೇತ್ಯಾದಿ ಬಿರುದಾಂಕಿತರಾದ ಪರ್ಯಾಯ
ಶ್ರೀಕಾಣಿಯೂರು ಮಠಾಧೀಶ್ವರ
**ಶ್ರೀ ವಿದ್ಯಾವಾರಿನಿಧಿತೀರ್ಥ ಶ್ರೀಪಾದಂಗಳವರ ಕನ್ನಡ ಮುನ್ನುಡಿ**
ಮತ್ತು
**ಶ್ರೀ ಯು. ವೆಂಕಟಕೃಷ್ಣ ರಾವ್, M. A.**
ನಿವೃತ್ತ ಪ್ರಿನ್ಸಿಪಾಲ್, ಎಸ್. ಎಂ. ಎಸ್. ಪಿ. ಸಂಸ್ಕೃತ ಕಾಲೇಜ್, ಉಡುಪಿ.
ಪ್ರಾಧ್ಯಾಪಕ, ಕ್ರಿಶ್ಚಿಯನ್ ಕಾಲೇಜ್, ಮದ್ರಾಸ್.
ಇವರ ಇಂಗ್ಲಿಷ್ ಮುನ್ನುಡಿಯೊಡನೆ.



ಪ್ರಕಾಶಕರು:
1860ನೇ ಇಸವಿಯ 21ನೇ ಆಕ್ಟಿನ ಮೇರೆಗೆ ರಿಜಿಸ್ಟ್ರಾಯಾಗಿರುವ
**ಶ್ರೀ ಮಧ್ವಮುನಿ ಸೇವಾ ಸಂಘ, ಉಡುಪಿ.**

SRI MADHWAMUNI SEVA SANGHA (REGD) UDIPI, S. K.

ಉಡುಪಿ ಮೆಜೆಸ್ಟಿಕ್ ಪ್ರೆಸ್ಸಿನಲ್ಲಿ ಮುದ್ರಿತವಾದುದು.

---

ಋಗ್ಭಾಷ್ಯ

67

ಬೆಲೆ: ರೂಪಾಯಿ ಇಪ್ಪತ್ತೈದು

Rs 25-00

VOLUME XI




ಸಂಚಿಕೆ ೧೧

॥ ಶ್ರೀ ಮಧ್ವನಾಥೋ ವಿಜಯತೇ ॥

ಶ್ರೀಮನ್ಮಧ್ವಾಚಾರ್ಯರ

ಸರ್ವ ಮೂಲಗ್ರಂಥಗಳ ಮಾಲಿಕೆಯ ಏಕಾದಶ ಗುಚ್ಛದಲ್ಲಿ

೩೭ನೇಯ ಗ್ರಂಥವಾದ

# ಋಗ್ಭಾಷ್ಯ

ದ್ವೈತವೇದಾಂತ ವಿದ್ವಾನ್, ದ್ವೈತವೇದಾಂತ ಶಿರೋಮಣಿ,

ಶ್ರೀಮನ್ಮಧ್ವಸಿದ್ಧಾಂತ ಪ್ರಬೋಧಿನೀ ಸಂಸ್ಕೃತ ಮಹಾಪಾಠಶಾಲಾ ನಿವೃತ್ತ ಪ್ರಧಾನ ಪಂಡಿತ

ಉಡುಪಿ ಆಯುರ್ವೇದ ಕಾಲೇಜಿನ ನಿವೃತ್ತ ಪ್ರೊಫೆಸರ್, ವೇದಾಂತ ವಾಚಸ್ಪತಿ

ಶ್ರೀ ಅಗ್ರಹಾರ ನಾರಾಯಣ ತಂತ್ರಿಗಳಿಂದ ವಿರಚಿತವಾದ

ಕನ್ನಡ ಟೀಕಾ ಭಾಷಾಂತರ ಸಹಿತ.

ಶ್ರೀ ೧೦೮ ಶ್ರೀ ಪರಮಹಂಸೇತ್ಯಾದಿ ಬಿರುದಾಂಕಿತರಾದ ಪರ್ಯಾಯ

ಶ್ರೀಕಾಣಿಯೂರು ಮಠಾಧೀಶ್ವರ

ಶ್ರೀ ವಿದ್ಯಾವಾರಿನಿಧಿತೀರ್ಥ ಶ್ರೀಪಾದಂಗಳವರ ಕನ್ನಡ ಮುನ್ನುಡಿ.

ಮತ್ತು

ಶ್ರೀ ಯು. ವೆಂಕಟಕೃಷ್ಣ ರಾವ್. M. A.

ನಿವೃತ್ತ ಪ್ರಿನ್ಸಿಪಾಲ್, ಎಸ್. ಎಂ. ಎಸ್. ಪಿ. ಸಂಸ್ಕೃತ ಕಾಲೇಜ್, ಉಡುಪಿ.

ಪ್ರಾಧ್ಯಾಪಕ, ಕ್ರಿಶ್ಚಿಯನ್ ಕಾಲೇಜ್, ಮದ್ರಾಸ್.

ಇವರ ಇಂಗ್ಲಿಷ್ ಮುನ್ನುಡಿಯೊಡನೆ.




ಪ್ರಕಾಶಕರು:

1860ನೇ ಇಸವಿಯ 21ನೇ ಆಕ್ಟಿನ ಮೇರೆಗೆ ರಿಜಿಸ್ಟ್ರಿಯಾಗಿರುವ

ಶ್ರೀ ಮಧ್ವಮುನಿ ಸೇವಾ ಸಂಘ, ಉಡುಪಿ.



SRI MADHWAMUNI SEVA SANGHA (REGD) UDIPI, S. K.



ಉಡುಪಿ ಮೆಜೆಸ್ಟಿಕ್ ಪ್ರೆಸ್ಸಿನಲ್ಲಿ ಮುದ್ರಿತವಾದುದು.

[illegible]

1967 ಬೆಲೆ: ರೂಪಾ[illegible] 25-00

# ಶ್ರೀ ಮಧ್ವಮುನಿ ಸೇವಾಸಂಘ (ರಿ.) ಉಡುಪಿ.

## ವರದಿ

1927ರಲ್ಲಿ ಸ್ಥಾಪಿಸಲ್ಪಟ್ಟ ಈ ಸಂಘವು ಇದುವರೆಗೆ ಶ್ರೀಮನ್ಮಧ್ವಾಚಾರ್ಯರ ಮೂಲ ಗ್ರಂಥಗಳಲ್ಲಿ "ಯತಿಪ್ರಣವ ಕಲ್ಪ" ಒಂದು ಹೊರತು ಉಳಿದ ಎಲ್ಲಾ ಗ್ರಂಥಗಳನ್ನು ಕನ್ನಡಕ್ಕೆ ಭಾಷಾಂತರಿಸಿ ಪ್ರಕಟಿಸಿದೆ. 11 ಸಂಪುಟಗಳಲ್ಲಿ ಪ್ರಕಟವಾದ ಈ 36 ಗ್ರಂಥಗಳ ತಯಾರಿಕೆಗಾಗಿ ಜಮ್ಲಾ ರೂ. 35,000—00 ದಷ್ಟು ವೆಚ್ಚವಾಗಿರುತ್ತದೆ.

ಕೊನೆಯದಾದ "ಯತಿಪ್ರಣವ ಕಲ್ಪ"ವನ್ನು ಇನ್ನು ಒಂದು ತಿಂಗಳಿನಲ್ಲಿ ಮುದ್ರಿಸಿ ಪ್ರಕಟಿಸಲಾಗುವುದು. ಅಲ್ಲಿಗೆ ಈ ಸಂಘದ ಸ್ಥಾಪನೆಯ ಮುಖ್ಯ ಉದ್ದೇಶವು ಒಂದಾವರ್ತಿ ಸಂಪೂರ್ಣ ಪಾಲಿಸಿದಂತೆ ಆಯಿತು.

1956ನೇ ಡಿಸೆಂಬರ ಅಂತ್ಯದಲ್ಲಿ ಸಂಘದಲ್ಲಿ ಸುಮಾರು ರೂ. 9500/= ಮುಖ ಬೆಲೆಯ ಪುಸ್ತಕಗಳ ದಾಸ್ತಾನು ಇತ್ತು. 1967ನೇ ಇಸವಿಯಲ್ಲಿ ಈ ವರೆಗೆ ಸುಮಾರು ರೂ. 1500/= ಮುಖ ಬೆಲೆಯ ಪುಸ್ತಕಗಳನ್ನು ಮೆಂಬರರಿಗೆ ಹಂಚಿಯದೆ.

ಈಗ ಮುದ್ರಣ ಕಾರ್ಯವು ಮುಗಿದ ಯುಗ್ಪಾಷ್ಯದ 500 ಪ್ರತಿಗಳ ಮುಖ ಬೆಲೆ ರೂ. 5000/= ಸೇರಿ ಸದ್ಯ ಸಂಘದಲ್ಲಿ ರೂ. 13000/= ಬೆಲೆಯ ಪುಸ್ತಕಗಳ ದಾಸ್ತಾನು ಇರುತ್ತದೆ

ಯತಿಪ್ರಣವ ಕಲ್ಪದ ಮುದ್ರಣದ ನಂತರ ಸಂಘದಿಂದ ಈ ಮೊದಲು ಮುದ್ರಿಸಲ್ಪಟ್ಟು ಖರ್ಚಾಗಿರುವ "ಶ್ರೀಮನ್ಮಹಾ ಭಾರತ ತಾತ್ಪರ್ಯ ನಿರ್ಣಯ"ಗ್ರಂಥವನ್ನು ಸಾಕಷ್ಟು ಪ್ರೋತ್ಸಾಹ ಸಿಕ್ಕಿದರೆ ಪುನರ್ಮುದ್ರಣ ಮಾಡುವ ಆಲೋಚನೆ ಮಾಡಿರುತ್ತೇವೆ. ಅಲ್ಲದೆ ಅದರೊಂದಿಗೆ ಶ್ರೀಮನ್ಮಧ್ವಾಚಾರ್ಯರ ಮೂಲ ಗ್ರಂಥಗಳ ಸರಳ ಕನ್ನಡ ಅನುವಾದವನ್ನು ಆಟುಟಾಗಿ ಚಿಕ್ಕ ಚಿಕ್ಕ ಪುಸ್ತಕಗಳ ರೂಪದಲ್ಲಿ ಮುದ್ರಿಸಿ ಪ್ರಚಾರ ಮಾಡಲು ಉದ್ದೇಶಿಸಿರುತ್ತೇವೆ.

ಸಂಘದಲ್ಲಿ ಈಗ ಇರುವ ಪುಸ್ತಕಗಳ ದಾಸ್ತಾನು ಆದಷ್ಟು ಬೇಗನೇ ಖರ್ಚಾಗುವಂತೆ ಸಂಘದ ಮೆಂಬರರು ಪ್ರಯತ್ನಿಸಿದಲ್ಲಿ ಸಂಘದ ಮೇಲಿನ ಪುನರ್ಮುದ್ರಣ ಕೆಲಸವನ್ನು ಶೀಘ್ರದಲ್ಲಿ ಮುಂದುವರಿಸಲು ಅನುಕೂಲವಾಗುತ್ತದೆ.

15—8—1967
ಉಡುಪಿ.

ಆಡಳಿತ ಮಂಡಳಿ
ಶ್ರೀಮಧ್ವಮುನಿ ಸೇವಾ ಸಂಘ, (ರಿ) ಉಡುಪಿ.

# ಶ್ರೀ ಮಧ್ವಮುನಿ ಸೇವಾ ಸಂಘದ ಪೋಷಕರು.

1. ಶ್ರೀ ವಿಷ್ಣು ಪದಂಗಳ ಅದಮಾರುಮಠದ ವಿಬುಧಪ್ರಿಯತೀರ್ಥ ಶ್ರೀಪಾದಂಗಳವರು.
2. ಶ್ರೀ ವಿಷ್ಣು ಪದಂಗಳ ಪುತ್ತಿಗಾಮಠದ ಸುಧೀಂದ್ರತೀರ್ಥ ಶ್ರೀಪಾದಂಗಳವರು.
3. ಶ್ರೀ ವಿಷ್ಣು ಪದಂಗಳ ಕೃಷ್ಣಾಪುರಮಠದ ವಿದ್ಯಾಪೂರ್ಣತೀರ್ಥ ಶ್ರೀಪಾದಂಗಳವರು.
4. ಶ್ರೀ ವಿಷ್ಣು ಪದಂಗಳ ಸೋದಾಮಠದ ವಿಶ್ವೇಂದ್ರತೀರ್ಥ ಶ್ರೀಪಾದಂಗಳವರು.
5. ಶ್ರೀ ಸೋದಾಮಠದ ವಿಶ್ವೋತ್ತಮತೀರ್ಥ ಶ್ರೀಪಾದಂಗಳವರು.
6. ಶ್ರೀ ವಿಷ್ಣು ಪದಂಗಳ ಕಾಣಿಯೂರು ಮಠದ ವಿದ್ಯಾಸಮುದ್ರತೀರ್ಥ ಶ್ರೀಪಾದಂಗಳವರು.
7. ಶ್ರೀ ವಿಷ್ಣು ಪದಂಗಳ ಫಲಿಮಾರುಮಠದ ರಘುನಂದನತೀರ್ಥ ಶ್ರೀಪಾದಂಗಳವರು.
8. ಶ್ರೀ ವಿಷ್ಣು ಪದಂಗಳ ಶೀರೂರುಮಠದ ಲಕ್ಷ್ಮೀಂದ್ರತೀರ್ಥ ಶ್ರೀಪಾದಂಗಳವರು.
9. ಶ್ರೀ ವಿಷ್ಣು ಪದಂಗಳ ಪೇಜಾವರಮಠದ ವಿಶ್ವಮಾನ್ಯತೀರ್ಥ ಶ್ರೀಪಾದಂಗಳವರು.
10. ಶ್ರೀ ವಿಷ್ಣು ಪದಂಗಳ ಉತ್ತರಾದಿಮಠದ ಸತ್ಯಧ್ಯಾನತೀರ್ಥ ಶ್ರೀಪಾದಂಗಳವರು.
11. ಶ್ರೀ ಸೋಸಲೆ ವ್ಯಾಸರಾಯ ಮಠದ ವಿದ್ಯಾಪ್ರಸನ್ನತೀರ್ಥ ಶ್ರೀಪಾದಂಗಳವರು.
12. ಶ್ರೀ ಕಂಪುಟನರಸಿಂಹಸ್ವಾಮಿ ಮಠದ ವಿದ್ಯಾಸಿಂಧುತೀರ್ಥ ಶ್ರೀಪಾದಂಗಳವರು.
13. ಶ್ರೀ ವಿಷ್ಣು ಪದಂಗಳ ಕಾಶೀಮಠದ ಸುಕೃತೀಂದ್ರತೀರ್ಥ ಶ್ರೀಪಾದಂಗಳವರು.
14. ಶ್ರೀ ಕಾಶೀಮಠದ ಸುಧೀಂದ್ರತೀರ್ಥ ಶ್ರೀಪಾದಂಗಳವರು.
15. ಶ್ರೀ ಗೋಕರ್ಣ ಪರ್ತಗಾಳಿಮಠದ ದ್ವಾರಕಾನಾಥತೀರ್ಥ ಶ್ರೀಪಾದಂಗಳವರು.
16. ಕೀರ್ತಿಶೇಷ ರಾಜಸಭಾಭೂಷಣ ಕರ್ಪೂರ ಶ್ರೀನಿವಾಸರಾಯರು ಬೆಂಗಳೂರು.
17. ಕೀರ್ತಿಶೇಷ ಡಾಕ್ಟರ್ ಉಡುಪಿ ರಾಮರಾಯರು ಮದ್ರಾಸ್.
18. ಶ್ರೀಯುತ ಮಣೇಲ್ ಕೃಷ್ಣರಾಯರ್ ಮತ್ತು ಸನ್ಸ್, ಮಂಗಳೂರು.
19. ಕೀರ್ತಿಶೇಷ ಶ್ರೀ ಕಾಲಘರು ಶ್ಯಾಮರಾಯರು. ಬಳ್ಳಾರಿ.
20. ಶ್ರೀಯುತ ಡಾಕ್ಟರ್ ಇಸ್ಕ ವೆಂಕಟರಾಯರು, ಬಳ್ಳಾರಿ.
21. ಕೀರ್ತಿಶೇಷ ಶ್ರೀ ಹರಿವಾಣಂ ಹನುಮಂತಾಚಾರ್ಯರು, ಬಳ್ಳಾರಿ.
22. ಕೀರ್ತಿಶೇಷ ಶ್ರೀ ಕಲ್ಮಂಜೆ ವ್ಯಾಸಾಚಾರ್ಯರು ಉಡುಪಿ.
23. ಶ್ರೀಯುತ ಡಾಕ್ಟರ್ ಉಡುಪಿ ಲಕ್ಷ್ಮೀನಾರಾಯಣರಾಯರು ಮದ್ರಾಸ್.
24. ಶ್ರೀಯುತ ಡಾಕ್ಟರ್ ಜಿ. ಎ. ಬದರಿನಾರಾಯಣ ಮದ್ರಾಸ್.
25. ಶ್ರೀಯುತ ಕೆ. ಎನ್. ರಂಗರಾಯರು ಕಲ್ಕತ್ತಾ.
25. ಶ್ರೀಯುತ ಉಡುಪಿ ರಾಘವೇಂದ್ರಾಚಾರ್ಯರು, ಡಿಲ್ಲಿ.
27. ಶ್ರೀಯುತ ಎ. ವಿ. ಕೃಷ್ಣಮೂರ್ತಿರಾಯರು, ಬೆಂಗಳೂರು.
28. ಶ್ರೀಯುತ ಗುಪ್ತ ಆಪ್ತರು.
29. ಶ್ರೀಯುತ ಕೆ. ಸೀತಾರಾಮರಾಯರು ಮದ್ರಾಸ್.
30. ಶ್ರೀಯುತ ಡಿ.ಕೆ.ರಾಮರಾಯರು ನಿವೃತ್ತ ಮೈಸೂರು ಹೈಕೋರ್ಟು ಜಡ್ಜರು, ಮೈಸೂರು.
31. ಕೀರ್ತಿಶೇಷ ರಾಜಸೇವಾಪ್ರಸಕ್ತ ವೈ. ಕೆ. ರಾಮಚಂದ್ರರಾವ್ ಮೈಸೂರು.
32. ಶ್ರೀಯುತ ಕಲ್ಸಂಕ ವೆಂಕಟ್ರಾಯ ಪೈ ಮತ್ತು ಸನ್ಸ್, ರಥಬೀದಿ, ಉಡುಪಿ.

# ಮುನ್ನುಡಿ

॥ ಶ್ರೀಃ ॥

**ಸದಾಗಮೈಕವಿಜ್ಞೇಯಂ ಸಮತೀತಕ್ಷರಾಕ್ಷರಂ ।**
**ನಾರಾಯಣಂ ಸದಾ ವಂದೇ ನಿರ್ದೋಷಾಶೇಷಸದ್ಗುಣಂ ॥**

ವಿಶ್ವಧಾರಕವಾದ ಧರ್ಮ ಮತ್ತು ನ್ಯಾಯ ನೀತಿಗಳಿಗೆ ಮೂಲಾಧಾರವು ವೇದವೇ ಎಂದು "ವೇದೋಽಖಿಲೋ ಧರ್ಮಮೂಲಂ" ಎಂಬ ಅಭಿಯುಕ್ತ ವಚನದಿಂದ ಸಿದ್ಧವಾಗುವುದು. ಪ್ರತ್ಯಕ್ಷಾದಿಗಳಿಂದ ತಿಳಿಯಲಾಗದ ಅಲೌಕಿಕ ಪುರುಷಾರ್ಥಸಾಧನವನ್ನು ತಿಳಿಸಿಕೊಡುವ ಪವಿತ್ರ ಗ್ರಂಥವೇ ವೇದವು. ಈ ವೇದವನ್ನೇ ಶ್ರುತಿ ಎಂದೂ ಆಗಮವೆಂದೂ ಶಾಸ್ತ್ರದಲ್ಲಿ ವ್ಯವಹರಿಸುವುದುಂಟು. ಇಂತಹ ವೇದವು ಆದಿಯಲ್ಲಿ ಅಪಾರ ಮಂತ್ರಗಳ ರಾಶಿಯಾಗಿದ್ದಿತೆಂದು— ಆ ದಿಶೆಯಲ್ಲಿ ಅದಕ್ಕೆ ಮೂಲವೇದವೆಂದು ಹೆಸರಿತ್ತೆಂದೂ ಪುರಾಣಾದಿಗಳಿಂದ ತಿಳಿದು ಬರುತ್ತದೆ. ಅನಂತರ ಋಕ್, ಯಜು, ಸಾಮ, ಅಥರ್ವ ಎಂದು ನಾಲ್ಕು ವಿಧವಾಗಿ ಸಾಕ್ಷಾನ್ನಾರಾಯಣಾಂಶ ಸಂಭೂತರಾದ ಮಹರ್ಷಿ ಶ್ರೀ ವೇದವ್ಯಾಸರು ಅವಾಂತರವೇದ ವಿಭಾಗ ಮಾಡಿದರು. ಕಾಲಾನುಸಾರವಾಗಿ ಆ ಅವಾಂತರ ವೇದಗಳೂ ಅಧ್ಯಯನಕ್ಕೆ ಅಸಾಧ್ಯವೆಂದು ತೋರಿದ್ದರಿಂದ ಋಗ್ವೇದವನ್ನು, ಇಪ್ಪತ್ತನಾಲ್ಕು, [illegible] (ಯಜುಸ್ಸ)ನ್ನು ನೂರ ಒಂದು, ಸಾಮವನ್ನು ಸಹಸ್ರ, ಅಥರ್ವಣವನ್ನು ಹನ್ನೆರಡು, ಈ ರೀತಿ ಶಾಖೆಗಳಾಗಿ [illegible] ಆ ವ್ಯಾಸರಿಂದಲೇ ವ್ಯವಸ್ಥಿತವಾಯಿತೆಂದು ಸ್ಕಾಂದ ಪುರಾಣದ ಆಧಾರದ ಮೇಲೆ ಶ್ರೀ ಮಧ್ವಾಚಾರ್ಯರು ತಮ್ಮ ಮೂಲ ಗ್ರಂಥಗಳಲ್ಲಿ ನಿರ್ಣಯಿಸಿರುವರು. ಈ ವೈದಿಕ ವಾಙ್ಮಯವು ಅಪಾರವೂ ಅತ್ಯಂತ ಗಹನಾರ್ಥವೂ ಆಗಿದ್ದು ವಿಶ್ವಜ್ಞಾನದ ನಿಧಿ ಎನಿಸಿದೆ. ಇದು ಅನಾದಿ ನಿತ್ಯ ಅಪೌರುಷೇಯ ಎಂದು ವೈದಿಕರ ಸಿದ್ಧಾಂತವಿದೆ.

ಇಷ್ಟೆಲ್ಲಾ ತೀರ್ಮಾನಕ್ಕೆ ಬರಬೇಕಾದರೆ ಮೂಲಭೂತ ಸಂಶಯಗಳು ಕೆಲವು ಸಹಜವಾಗಿ ಬರುವುದಕ್ಕಿದೆ. ಅದೇನಂದರೆ—ವೇದವು ಪ್ರಮಾಣವೆಂದಾಗಬೇಕಾದರೆ ಲಕ್ಷಣ— ಹಾಗೂ ಪ್ರಮಾಣಗಳಿರಬೇಕು. ಯದ್ಯಪಿ ಅಲೌಕಿಕ ಪುರುಷಾರ್ಥ ಸಾಧನವನ್ನು ಬೋಧಿಸತಕ್ಕ ಗ್ರಂಥವೇ ವೇದವೆಂದು ಲಕ್ಷಣ ಹೇಳಿದೆ.

**ಪ್ರತ್ಯಕ್ಷೇಣಾನುಮಿತ್ಯಾ ವಾ ಯಸ್ತೂಪಾಯೋ ನ ಬಾಧ್ಯತೇ ।**
**ಏತಂ ವಿದಂತಿ ವೇದೇನ ತಸ್ಮಾದ್ವೇದಸ್ಯ ವೇದತಾ ॥ ಇತಿ**

ಆದರೆ ಇದು ಮನ್ವಾದಿ ಶಾಸ್ತ್ರಗಳಲ್ಲಿ ಬಂದೇ ಬರುವುದು. ಇದೇ ರೀತಿ ವೇದದ ಅಸ್ತಿತ್ವದಲ್ಲಿ ಪ್ರಮಾಣವು, ಎಂಬುದು ಮುಖ್ಯವಾದ ವಾದವು. "ಋಗ್ವೇದಂ ಭಗವೋಽಧ್ಯೇಮಿ" ಎಂಬ ವಾಕ್ಯವು ಋಗ್ವೇದಾದಿಗಳ ಅಸ್ತಿತ್ವದಲ್ಲಿ ಪ್ರಮಾಣವೆಂದರೆ ವೇದದ ಸ್ವರೂಪಸಿದ್ಧಿಯಲ್ಲಿ ವೇದವನ್ನೇ ಮುಂದಿರಿಸಿದಂತಾಗುವುದಿಲ್ಲವೆ? ಅದಕ್ಕೆ—ಅಂದರೆ ವೇದಕ್ಕೆ ವೇದವೇ ಪ್ರಮಾಣವೆಂದಾಯಿತು. ಇದು ಸರಿಯಲ್ಲ. ಇದಕ್ಕೆ ಉತ್ತರ. ಉತ್ತರವೇನೆಂದರೆ ಪ್ರಾಚೀನ ತಪಸ್ವಿಗಳಾದ ಮಹರ್ಷಿಗಳು ಇದು ಮಂತ್ರ— ಇದು ಬ್ರಾಹ್ಮಣವಾಕ್ಯ — ಇದು ಅರಣ್ಯಕ, ಇದು ಉಪನಿಷತ್ ಎಂಬಿತ್ಯಾದಿ ವ್ಯವಹಾರಗಳಿಂದ ಯಾವ ಅಪೂರ್ವ ವಾಙ್ಮಯಗಳು ಆ ರೀತಿಯಿಂದ ಜಗತ್ತಿನಲ್ಲಿ ಪ್ರಸಿದ್ಧಿ ಪಡೆದಿರುವವೋ, ಅವೇ ವೇದಗಳು ಎಂದಷ್ಟೇ ಇದಕ್ಕುತ್ತರ. ಇಷ್ಟಾದ ಮೇಲೆ ಈ ವಿಷಯದಲ್ಲಿ ಶ್ರುತಿಯೂ ಸ್ಮೃತಿಗಳೂ ಪೋಷಕಗಳಾಗುವವು. ಹೀಗಿದ್ದರೂ—ವೇದಗಳು ಪೌರುಷೇಯಗಳೋ? ಅಪೌರುಷೇಯಗಳೋ? ಪೌರುಷೇಯಗಳಾದರೆ ಅದರ ಕರ್ತೃವಿನಲ್ಲಿ ಅಜ್ಞಾನ ವಿಪರೀತ ಜ್ಞಾನಾದಿಗಳು ಇಲ್ಲ ಎಂಬುದು ಹೇಗೆ ಸಿದ್ಧವಾಗಬೇಕು? ಅಲ್ಲದೆ ಪ್ರಮಾಣಭೂತ ವಾಕ್ಯಗಳು ಕರ್ತೃವಿನ ಗುಣಗಳಿಂದಾಗಿಯೇ ಪ್ರಮಾಣಗಳೆನಿಸಿಕೊಳ್ಳುವವು. ವೇದಕರ್ತನಲ್ಲಿ ಪ್ರಾಮಾಣ್ಯಕ್ಕೆ ಉಪಯುಕ್ತ ಸಾರ್ವಜ್ಞ್ಯಪಟುಕರಣತ್ವ ಮುಂತಾ

ದವುಗಳೆಂಬುದಕ್ಕೆ ಏನು ಪ್ರಮಾಣ? ಇನ್ನು, ವೇದಗಳು ಅಪೌರುಷೇಯ. ಅವು ಅನಾದಿನಿತ್ಯ ಎನ್ನುವುದಾದರೆ ಈ ಪಕ್ಷದಲ್ಲಿ ಅನೇಕಾಕ್ಷೇಪಗಳನ್ನೆದುರಿಸಬೇಕಾಗುವುದು. ವಾಕ್ಯ ಎಂದಾದ ಮೇಲೆ ಬಾಯಿಂದ ಉಚ್ಚಾರ ಮಾಡಲ್ಪಟ್ಟದ್ದೇ. ಅಲ್ಲದೆ "ಅಪೌರುಷೇಯ ವಾಕ್ಯ" ಎನ್ನುವುದು "ನಾನು ಮೂಕ" ಎಂದು ಹೇಳಿದಂತೆ ವಿರುದ್ಧವೇ ಆಗುವುದು. ವಾಕ್ಯ ಪ್ರಾಮಾಣ್ಯವು, ಆಪ್ತೋಕ್ತತ್ವರೂಪಗುಣದಿಂದಲೇ ಲೋಕದಲ್ಲಿ ಸಿದ್ಧವಾಗುವುದರಿಂದ ವಾಕ್ಯರಾಶಿ ಎನಿಸಿದ ವೇದಗಳಿಗೆ ಅದರ ಹೊರತು ಹೇಗೆ ಪ್ರಾಮಾಣ್ಯವು ಉಂಟಾದೀತು? ಅಪೌರುಷೇಯವೆಂದಾದರೆ ಇದಕ್ಕೆಲ್ಲಿಯ ಅವಕಾಶ? ಎಂದು ಮುಂತಾಗಿ ಸರ್ವಸಾಮಾನ್ಯ ಆಕ್ಷೇಪವು ಇದ್ದೇ ಇದೆ. ಇದಕ್ಕೂ ಉತ್ತರ ವಿಲ್ಲದಿಲ್ಲ. ಅಬಾಧಿತ ಜ್ಞಾನವನ್ನು ಉಂಟುಮಾಡುವುದು ಯಾವುದೋ ಅದು ಪ್ರಮಾಣ. ಪ್ರತ್ಯಕ್ಷಾದಿಗಳನ್ನೂ ಪ್ರಮಾಣವೆನ್ನುವುದು ಈ ಕಾರಣದಿಂದಲೇ. ಹೀಗೆಂದ ಮೇಲೆ ವೇದವಾಕ್ಯವೂ ಅಬಾಧಿತ ಜ್ಞಾನವನ್ನು ಲೌಕಿಕ ವಾಕ್ಯದಂತೆ ಉಂಟು ಮಾಡುವುದಾದರೆ ಏಕೆ ಪ್ರಮಾಣವಾಗಲಾರದು? ವಾಕ್ಯದಿಂದ ಪ್ರಮೆಯೇ ಹುಟ್ಟುತ್ತದೆಂಬ ನಿಯಮವಿಲ್ಲದೆಂದರೆ ಅದು ಪ್ರತ್ಯಕ್ಷದಲ್ಲಿಯೂ ಸಮಾನ. ಹಗ್ಗವನ್ನು ನೋಡಿ ಇದು ಹಾವು ಎಂದು ಭ್ರಮೆ ಬರುವುದಿಲ್ಲವೇ? ಇನ್ನೊಂದು ವಿಶೇಷವೇನೆಂದರೆ—ವೇದವು ಪುರುಷ ಬುದ್ಧಿಬಲದಿಂದ ನಿರ್ಮಿತವಾದುದಲ್ಲ, ಎಂದೊಪ್ಪಿಕೊಂಡರೆ ಪುರುಷನಲ್ಲಿ ಸಹಜವಾಗಿರತಕ್ಕ ಅಜ್ಞಾನಾದಿ ದೋಷಗಳ ಸ್ಪರ್ಶವೇ ಇಲ್ಲವೆಂದಾಗಿ ಅಪ್ರಾಮಾಣ್ಯ ಶಂಕೆಗೇನೇ ಎಡೆ ಇಲ್ಲವೆಂದಾಗುವುದು. ಇಂತಹ ವಾಙ್ಮಯ ಪ್ರಬಂಧ ಇರಬಹುದೇ? ಎಂದರೆ—ಇದೆ, ಹೇಗೆ ಕಾಲ ಆಕಾಶಾದಿಗಳು ಅಪೌರುಷೇಯಗಳಾಗಿ ನಿತ್ಯವೆನಿಸಿರುವವೋ ಅಂತೆಯೇ ಅದರ ಜೊತೆಯಲ್ಲಿ ವೇದವನ್ನೂ ಸೇರಿಸಿಕೊಂಡರಾಯ್ತು. ಪ್ರಮಾಣಸಿದ್ಧ ಅಸ್ತಿತ್ವವು ಕಾಲಾಕಾಶಾದಿಗಳಂತೆ ವೇದಕ್ಕೂ ಸಮಾನವೇ. ಈ ರೀತಿ ಒಪ್ಪಿಕೊಳ್ಳುವುದರಲ್ಲಿ ಬಾಧಕವಿಲ್ಲ. ಇಲ್ಲವಾದರೆ ಅನುಭವಸಿದ್ಧ ಕಾಲಾಕಾಶಾದಿಗಳನ್ನೂ ಒಪ್ಪದಿರಬೇಕಾಗುವುದು.) ತತ್ವಜಿಜ್ಞಾಸೆಯಿಂದ ಶೀಲವುದಾದರೆ—ಪರಮಾತ್ಮನು ಎಲ್ಲ ಕಾಲದಲ್ಲಿಯೂ ಒಬ್ಬನೇ ಎಂಬುದು ಎಲ್ಲರಿಗೂ ಸಮ್ಮತವಾದ ವಿಷಯ. ಪ್ರತಿ ಬ್ರಹ್ಮಕಲ್ಪದಲ್ಲಿಯೂ ಸೃಷ್ಟ್ಯಾದಿಕರ್ತನು ಅವನೊಬ್ಬನೆ. ಕಲ್ಪಭೇದದಿಂದ ಪರಮಾತ್ಮಭೇದವನ್ನೂ ಒಪ್ಪಲು ಸಾಧ್ಯವಿಲ್ಲ. ಏಕೆಂದರೆ ಆ ರೀತಿ ಒಪ್ಪಿದರೆ ಹಿಂದಿನ ಕಲ್ಪದಲ್ಲಿ ಸೃಷ್ಟ್ಯಾದಿಗಳನ್ನು ಮಾಡಿದ ಪರಮಾತ್ಮನು ಎಲ್ಲಿ ಹೋದನು? ಅವನಿದ್ದರೆ ಈ ಕಲ್ಪದಲ್ಲಿ ಸೃಷ್ಟ್ಯಾದಿ ವ್ಯಾಪಾರವನ್ನು ಬಿಡಲು ಕಾರಣವೇನು? ಅಶಕ್ತತ್ವಾದಿಗಳನ್ನೂ ಅವನಲ್ಲಿ ಒಪ್ಪಲು ಸಾಧ್ಯವಿಲ್ಲ—ಅವನು ಸರ್ವಶಕ್ತ, ಸರ್ವ ಸ್ವತಂತ್ರ, ಸರ್ವೇಶ್ವರ-ಈ ಗುಣಗಳಲ್ಲಿದವನು ಸರ್ವೇಶ್ವರ-ಪರಮಾತ್ಮನೇ ಆಗುವುದಿಲ್ಲ. ಅದಲ್ಲದೆ ಅನೇಕ ಪರಮಾತ್ಮನನ್ನು ಒಪ್ಪಿದರೆ ಆ ಪರಮಾತ್ಮನ ಒಡೆತನ ಈ ಪರಮಾತ್ಮನಿಗಿಲ್ಲ, ಎಂದರೆ ಸರ್ವೇಶ್ವರನಾಗುವುದಿಲ್ಲ. ಉಂಟೆಂದು ಹೇಳಿದರೆ ಆ ಪರಮಾತ್ಮನು ಸರ್ವೇಶ್ವರನಲ್ಲವೆಂದಾಗುವುದು. ಈ ರೀತಿ ಯಾವ ಕಲ್ಪದ ಪರಮಾತ್ಮನೂ ಸರ್ವೇಶ್ವರನಲ್ಲವೆಂದಾಗುವುದು. ಆದ್ದರಿಂದ ಪರಮಾತ್ಮ ಅನಂತ ಕಾಲದಲ್ಲಿಯೂ ಒಬ್ಬನೇ, ಎಂದು ಯಾರೂ ಒಪ್ಪಲೇಬೇಕು. ಸರ್ವಜ್ಞನಲ್ಲದವನು ಸೃಷ್ಟ್ಯಾದಿಕರ್ತನಾಗಲು ಸಾಧ್ಯವಿಲ್ಲವಾದ್ದರಿಂದ ಸರ್ವಜ್ಞನು ಆಗಿರಲೇಬೇಕು, ಹೀಗೆಂದಾದ ಮೇಲೆ ಹಿಂದಿನ ಕಲ್ಪದಲ್ಲಿದ್ದ ವೇದವನ್ನೂ ಈ ಕಲ್ಪದಲ್ಲಿ ಮರೆತು ಬಿಡಲು ಸಾಧ್ಯವಿಲ್ಲ. ಅದು ತನ್ನ ಬುದ್ಧಿಯಲ್ಲಿ ಅಚ್ಚಳಿಯದಿರುವಾಗ ಈ ಕಲ್ಪದಲ್ಲಿ ಹೊಸವೇದವನ್ನು ವ್ಯರ್ಥವಾಗಿ ಮಾಡಲು ಕಾರಣವೇನು? ಇಸಂಗ ಸೃಷ್ಟ್ಯಾದಿಯಲ್ಲಿ ಪರಮಾತ್ಮನು ವೇದವನ್ನು, ಕಾಳಿದಾಸಾದಿ ಕವಿಗಳು ರಘುವಂಶಾದಿ ಕಾವ್ಯಗಳನ್ನು ಮಾಡಿದಂತೆ ಹೊಸದಾಗಿ ಮಾಡಿದನು ಎಂಬ ವಾದವೂ ಸ್ವಾಗತಾರ್ಹವಲ್ಲ ಎಂದು ಸಿದ್ಧವಾಯ್ತು. ಪರೀಸಿ ಹಿಂದಿನ ವೇದವನ್ನೇ ಸೃಷ್ಟ್ಯಾದಿಯಲ್ಲಿ ಆದಿಮಾನವ (ಚತುರ್ಮುಖಬ್ರಹ್ಮ)ನಿಗೆ ಶ್ರೀಪರಮಾತ್ಮನು ಉಪದೇಶ ಮಾಡುತ್ತಾನೆ. ಹಿಂದಿನ ಕಲ್ಪದಲ್ಲಿ ಅದಕ್ಕಿಂತ ಹಿಂದಿನ ಕಲ್ಪದಲ್ಲಿದ್ದುದನ್ನು ಎಂದು ಹಿಂದೆ ಹಿಂದೆ ನಮ್ಮ ಬುದ್ಧಿಯನ್ನೂ ಹಿಂದಿರುಗಿಸಿದರೆ ಬುಡವಿಲ್ಲದ ಕಲ್ಪಪ್ರವಾಹದಲ್ಲಿ ವೇದವೆಂದು ಪ್ರಸಿದ್ಧಿ ಪಡೆದ ಪವಿತ್ರ ತತ್ವಜ್ಞಾನ ಸಾಧನವಾದ ವಿಲಕ್ಷಣ ಅಮೃತವಾಣಿಯು "ಅನಾದಿನಿತ್ಯ" ಆದುದರಿಂದಲೇ "ಅಪೌರುಷೇಯ"ವೆಂದು ಸುಲಭವಾಗಿ ಉತ್ತರಿಸಬಹುದು. ಇದರಿಂದ—ಸರ್ವಸೃಷ್ಟಿಕರ್ತನು ಪರಮಾತ್ಮ ಎಂದು ಹೇಳುತ್ತದೆ ವೇದ. ಆ ರೀತಿಯೇ ವೈದಿಕರ ಸಿದ್ಧಾಂತವೂ ಸಾರುತ್ತಿದೆ. ವೇದ ಅನಾದಿ ನಿತ್ಯ ಇದು ಹೇಗೆ? ಸರ್ವದಲ್ಲಿ ವೇದ

ಸೇರುವುದಿಲ್ಲವೇ? ಎಂಬ ಶಂಕೆಗೂ ಸಮಾಧಾನ ದೊರೆತಂತಾಯಿತು. ಪರಮಾತ್ಮನು ತನ್ನ ಬುದ್ಧಿಯಲ್ಲಿ ಶಾಶ್ವತವಾಗಿದ್ದ ವೇದವನ್ನು ಆಯಾಯ ಕಲ್ಪದ ಆದಿಯಲ್ಲಿ ಚತುರ್ಮುಖ ಬ್ರಹ್ಮನಿಗೆ (ಅವನ ಮೂಲಕ ಮುಂದಿನ ಜನಾಂಗಕ್ಕೆ) ಸ್ವತಂತ್ರವಾಗಿ ಉಪದೇಶಿಸುತ್ತಾನೆ. ಇದುವೇ ನಿತ್ಯಸನ್ನಲಾದ ವೇದಕ್ಕೆ ಪರಮಾತ್ಮನಿಂದ ಉತ್ಪತ್ತಿ. ಒಬ್ಬನ ಉಪದೇಶವನ್ನನುಸರಿಸಿ ಉಪದೇಶ ಮಾಡುವಿಕೆಯು ವೇದಕ್ಕೆ ಉತ್ಪತ್ತಿಯಲ್ಲ. ಅದು ಅದರ ಅನುವಾದಮಾತ್ರ. ಇದರಿಂದ ವೇದವನ್ನು ಪಾರಾಯಣ ಮಾಡ ತಕ್ಕವರಾರೂ ವೇದೋತ್ಪಾದಕರಲ್ಲವೆಂದು ಸಿದ್ಧವಾಯಿತು. ಈ ರೀತಿಯ ವೇದೋತ್ಪತ್ತಿಯನ್ನು ಶ್ರೀ ಮಧ್ವಾಚಾರ್ಯರು ವೇದಸ್ಯಾಪೀಶ್ವರೇಚ್ಛಯಾ।ವ್ಯಕ್ತಿರ್ನಾಮ ವಿಶೇಷೋಽಸ್ತಿ ತಸ್ಮಾತ್ತದ್ವ್ಯಕ್ತ್ಯೈವ ಹಿ। ಉತ್ಪತ್ತಿರತ್ರ ಕಥಿತಾ...."ಎಂದು ಅನುವ್ಯಾಖ್ಯಾನದಲ್ಲಿ ನಿರೂಪಿಸಿರುವರು. ಹೀಗಿದ್ದರೂ-ಪುನರುಕ್ತಿ, ವ್ಯಾಹತಿ, ಸಿದ್ಧಬೋಧಕತ್ವ ಅರ್ವಾಚೀನ ಕಥಾ-ವ್ಯಕ್ತಿಸೂಚಕತ್ವ ಮುಂತಾದವುಗಳಿಂದ ಪ್ರಾಮಾಣ್ಯಕ್ಕೂ ಅನಾದಿ ನಿತ್ಯತ್ವಕ್ಕೂ ಬಾಧಕ ಬರುವುದಿಲ್ಲವೇ? ಎಂದು ಶಂಕಿಸಲೆಡೆಯಿದೆ. ಆದರೆ ಈ ವಿಚಾರವನ್ನೂ ವೇದಾರ್ಥ ನಿರ್ಣಾಯಕ ಪೂರ್ವಮೀಮಾಂಸಾಶಾಸ್ತ್ರವು ಕೂಲಂಕಷವಾಗಿ ವಿಚಾರ ಮಾಡಿ ಪ್ರಾಮಾಣ್ಯಾದಿಗಳಿಗೆ ಯಾವ ತರದ ಧಕ್ಕೆಯುಂಟಾಗುವುದಿಲ್ಲವೆಂದು ಸಿದ್ಧಾಂತಪಡಿಸಿದ್ದುಂಟು. ಅದರ ಸಾರಾಂಶವಿಷ್ಟೆ— ಆದರ, ಶಪಥ ಮುಂತಾದುವುಗಳನ್ನು ಸೂಚಿಸುವಲ್ಲಿ ಲೋಕ ವ್ಯವಹಾರದಲ್ಲಿಯೂ ಪುನರುಕ್ತಿ ತೋರುವುದರಿಂದ ವೇದದಲ್ಲಿ ಪುನರುಕ್ತಿ, ಆಯಾಯ ಅರ್ಥವಿಶೇಷದಲ್ಲಿ ಯುಕ್ತವೇ. ವ್ಯಾಹತಿಯೂ ಅಧಿಕಾರಿ ವಿಶೇಷದಿಂದ ಅವ್ಯಾಹತ ವಾಗುವುದು. ಕ್ಷೌರ ಪ್ರಕರಣದಲ್ಲಿ "ಆಪ ಉಂದಂತು ಜೀವಸೇ" ನೀರು ಒದ್ದೆ ಮಾಡಲಿ ಎಂದು ತಲೆಗೆ ನೀರು ಹಚ್ಚುವಲ್ಲಿ ಪ್ರಾರ್ಥನೆ ಇದೆ. ಇದು ಪ್ರತ್ಯಕ್ಷ ಸಿದ್ಧವಾದರೂ ಇದರಲ್ಲಿ ನೀರಿನ ಅಭಿಮಾನಿ ದೇವತೆಯ ಅಲೌಕಿಕ ಅನುಗ್ರಹವಿಶೇಷವೂ ಉಂಟಾಗಬೇಕೆಂಬ ಅಪೇಕ್ಷೆಯು ಇದರಲ್ಲಿ ಅಡಕವಾಗಿರುವುದರಿಂದ ಸಿದ್ಧಾರ್ಥ ಬೋಧಕತ್ವವೂ ಇಲ್ಲ."ಧಾತಾ ಯಥಾಪೂರ್ವಮಕಲ್ಪಯತ್"ಹಿಂದಿನ ಕಲ್ಪದಂತೆ ಈ ಕಲ್ಪದಲ್ಲಿಯೂ ಪರಮಾತ್ಮನು ಏಕ ರೀತಿಯಾಗಿ ಸೃಷ್ಟಿಸಿದನೆಂದು ಶ್ರುತಿ ಸಾರುತ್ತದೆ. ಗಮನಾರ್ಹ ಮಹಾಕಾರ್ಯಗಳು ಪ್ರತಿಕಲ್ಪದಲ್ಲಿಯೂ ಸಮಾನವಾದುದರಿಂದ ಶಬ್ದಾನುಪೂರ್ವಿಯೂ ಒಂದೇ ರೀತಿಯಾಗಿ ನಿತ್ಯವೇದದಲ್ಲಿರಲಡ್ಡಿ ಇಲ್ಲ. ಈ ವಿಷಯವು ಶಾಸ್ತ್ರಗಳಲ್ಲಿ ಅಲ್ಲಲ್ಲಿ ಬಹು ಮುಖವಾಗಿ ಚರ್ಚಿಸಲ್ಪಟ್ಟಿರುವದು. ಆದುದರಿಂದ ವೇದಕ್ಕೆ—ಅಪೌರುಷೇಯತ್ವ, ಆದರಿಂದಲೆ ಅನಾದಿ ನಿತ್ಯತ್ವ, ಅದರಿಂದಲೇ ಪ್ರಾಮಾಣ್ಯ, ನಿಸ್ಸಂದಿಗ್ಧವಾಗಿ ಸಿದ್ಧವಾದಂತಾಗುವುದು. ಧರ್ಮಾಧರ್ಮವ್ಯವಸ್ಥಾಪಕವೂ ಅಲೌಕಿಕ ಪರಮಪುರುಷಾರ್ಥ ಸಾಧನವೂ ಅತ್ಯಂತ ಪವಿತ್ರವೂ ಆದ ವೇದವು ಮಾನವಕೋಟಿಯ ಸರ್ವಪುರುಷಾರ್ಥಚಿಂತಾಮಣಿಯು, ಅಮೂಲ್ಯ ತತ್ತ್ವಜ್ಞಾನದ ನಿಧಿಯು.

ಈ ತರದ ವಿಲಕ್ಷಣ ವೈದಿಕ ವಾಙ್ಮಯದ ಅಧ್ಯಯನವು ಜನಸಾಮಾನ್ಯರಿಗೆ ಆಗದ ಕೆಲಸವೆಂದೇ ಪ್ರಾಚೀನ ಮಹರ್ಷಿಗಳು ವಿಶಿಷ್ಟ ಜ್ಞಾನವುಳ್ಳ ತ್ರೈವರ್ಣಿಕರಿಗೇನೇ ಎಂದು ನಿರ್ಣಯಿಸಿ ಇತರರು ಅಧ್ಯಯನ ಮಾಡಕೂಡದೆಂದು ನಿಷೇಧಿಸಿರುವರು. ಯದ್ಯಪಿ ಅಧ್ಯಯನೋಪಯೋಗಿ ವಿಶಿಷ್ಟ ಜ್ಞಾನವು ತ್ರೈವರ್ಣಿಕರಲ್ಲಿ ಸೀಮಿತವಾಗಿದೆಯೆಂದೂ ಇತರರಲ್ಲಿ ಇಲ್ಲವೇ ಇಲ್ಲವೆಂದಾಗಲೀ ಪ್ರಾಚೀನರ ಅಭಿಪ್ರಾಯವಲ್ಲ. ವಿಶಿಷ್ಟ ಜ್ಞಾನವುಳ್ಳವರು ಅಧ್ಯಯನಾಧಿಕಾರಿ ಎಂದರೆ ಅವ್ಯವಸ್ಥಿತವಾಗುವುದು. ಈ ಕಾರಣದಿಂದ ಒಂದು ರೀತಿಯ ವ್ಯವಸ್ಥೆ ಬೇಕೆಂಬ ಉದ್ದೇಶದಿಂದಲೇ ಆ ರೀತಿ ನಿರ್ಣಯಿಸಿರುವರು. ಇದು ಒಂದು ತರದ ಸಂಕುಚಿತ ಭಾವನೆಯ ಪ್ರತೀಕವೆಂದು ಹೇಳಲು ಅವಕಾಶವಿದೆ. ಆದರೆ ವಿದ್ಯುತ್ಕಾರ್ಖಾನೆಯಲ್ಲಿ "ಅಪ್ಪಣೆ ವಿನಹ ಒಳಗೆ ಪ್ರವೇಶವಿಲ್ಲ" ಎಂಬ ಬೋರ್ಡು ಹಾಕುವದಿದೆ. ಇದರ ಉದ್ದೇಶ- ವಿದ್ಯುತ್ತಿನ ಪೂರ್ವೋತ್ತರ ಸೂಕ್ಷ್ಮ ವಿಷಯಗಳನ್ನು ಅರಿಯದವರು ಅನಾವಶ್ಯಕವಾಗಿ ಬಂದು ಮುಟ್ಟಿದಲ್ಲಿ ಪ್ರಾಣಕ್ಕೇನೆ ಅಪಾಯ ಒದಗೀತೆಂದು ಅದೊಂದು ತರದ ಲೋಕಹಿತ ಭಾವನೆಯಿಂದಲೇ ಅಲ್ಲದೆ ಸಂಕುಚಿತತೆ ಹೇಗೆ ಅಲ್ಲವೋ ಹಾಗೆಯೇ ವೇದವೂ ಸಾಮಾನ್ಯ ಲೌಕಿಕ ಕಾವ್ಯಾದಿಗಳಂತೆ ಅಧ್ಯಯನ ಮಾಡತಕ್ಕದ್ದಲ್ಲ. ಅದಕ್ಕೆ ಜನ್ಮ ಪರಿಶುದ್ಧಿ, ಆಚಾರ ತತ್ಪರತೆ, ವೈದಿಕ ಸಂಸ್ಕಾರ ಸಂಸ್ಕೃತತ್ವ, ದೇಶಕಾಲಾದಿನಿಯಮ, ತ್ರಿಕರಣ ಶುದ್ಧಿ, ಮುಂತಾದ ಹಲವು ಸಾಧನ ಸಂಪನ್ನರಿಂದಲೇ ಅಧ್ಯಯನಾ

ಹರವು. ಇದಕ್ಕೆ ವಿಪರೀತವಾಗಿ ನಡೆಸಿದರೆ ಅನಿಷ್ಟ ಫಲವು. ಅಂತಹ ಅನಿಷ್ಟಕ್ಕೆ ಗುರಿಯಾಗಬಾರದೆಂದೇ ಈ ತರದ ನಿರ್ಣಯವನ್ನು ಕೈಕೊಳ್ಳಬೇಕಾಯ್ತು. ಅಧಿಕಾರಿಕ ಕ್ರಮಬದ್ಧ ಅಧ್ಯಯನವು ಚಿಂತಿತ ಫಲದಾಯಕವು. ಗೋವೆ ಕಡೆ ಸಂಚಾರ ಮಾಡುತ್ತಿದ್ದ ಶ್ರೀಮನ್ಮಧ್ವಾಚಾರ್ಯರು ಅಲ್ಲಿಯ ಜನರ ಅಭಿಪ್ರಾಯದಂತೆ ಅಂಗೈಯಲ್ಲಿ ಬೀಜವನ್ನಿರಿಸಿ ವೇದ ಮಂತ್ರವನ್ನು ಜಪಿಸುತ್ತಿರುವಾಗ, ಬೀಜ ಅಂಕುರಿತವಾಗಿ ಕ್ರಮೇಣ ಸಸ್ಯವಾಗಿ ಬೆಳೆದುದನ್ನು ತೋರಿಸಿ ವೈದಿಕ ಮಂತ್ರ ಸಾಮರ್ಥ್ಯವನ್ನು ಸರ್ವರಿಗೂ ಖಚಿತಪಡಿಸಿದರೆಂದು ಐತಿಹ್ಯವಿದೆ. ಅಂತೆಯೇ ಅಕ್ರಮವಾಗಿ ಜಪಮಾಡಿದವರಿಗೆ ಅನಿಷ್ಟ ಫಲವೂ ಉಂಟಾದುದಕ್ಕೆ ಅನೇಕ ಕಥಾ ಸಂದರ್ಭಗಳು ಪುರಾಣಗಳಲ್ಲಿ ಉಲ್ಲೇಖಿತಗಳಾಗಿರುವುವು. ಆದುದರಿಂದ ಪ್ರಾಯಶಃ ವಿಶಿಷ್ಟ ಜ್ಞಾನಾದಿ ಸಂಪನ್ನರಾದ ತ್ರೈವರ್ಣಿಕರು ಅಧ್ಯಯನಾಧಿಕಾರಿಗಳೆಂದು ನಿರ್ಣಯಿಸಿದ್ದು ನ್ಯಾಯ ಸಮ್ಮತವೇ ಆಗಿದೆ

ಅಧ್ಯಯನವೂ, ಕೇವಲ ಕಂಠಪಾಠ ಮಾತ್ರವಲ್ಲ. ಅರ್ಥ ಜ್ಞಾನ ಸಂಪಾದನೆಯೇ ಅಧ್ಯಯನದ ಗುರಿ. "ವೇದಃ ಕೃತ್ಸ್ನೋಽಧಿಗಂತವ್ಯಃ ಸರಹಸ್ಯೋ ದ್ವಿಜನ್ಮನಾ" ಎಂದು ಸ್ಮೃತಿ ವಚನವು. ಸಮರ್ಥಿತವನ್ನು ಶ್ರುತಿಯೂ—

"ಸ್ಥಾಣುರಯಂ ಭಾರಹಾರಃ ಕಿಲಾಭೂದಧೀತ್ಯ ವೇದಂ ನ ವಿಜಾನಾತಿ ಯೋಽರ್ಥಂ!" ವೇದವನ್ನು ಓದಿ ಅರ್ಥಜ್ಞಾನಮಾಡಿಕೊಳ್ಳದವನು ಭಾರವನ್ನು ಹೊತ್ತುಕೊಂಡ ಮೋಟುಮರದಂತೆ, ಎಂದು ಹೇಳುತ್ತಿರುವುದು, ಅರ್ಥಜ್ಞಾನವನ್ನು ಅನುಕೂಲವಿದ್ದರೆ ಮಾಡಿಕೊಳ್ಳುವುದು, ಅನುಕೂಲವಿಲ್ಲದವರು ಬೇಡ ಎಂದೆನ್ನಲಾಗದು. ಅದು ಕಾಮ್ಯ ಕರ್ಮವಲ್ಲ-ತ್ರೈವರ್ಣಿಕರಿಗೆ ನಿತ್ಯಕರ್ತವ್ಯವಾಗಿರುವುದರಿಂದ ಸಂಧ್ಯಾವಂದನಾದಿಗಳಂತೆ ಅದು ಅವಶ್ಯಾನುಷ್ಠೇಯ. ಈ ವಿಷಯವನ್ನು ಶಾಸ್ತ್ರಕರ್ತೃಗಳೆಲ್ಲರೂ ಒಮ್ಮತದಿಂದ ನಿರ್ಣಯಿಸಿರುವರು. ಅಪೌರುಷೇಯ ವಿಷಯವನ್ನು ಪ್ರಕಾಶ ಪಡಿಸುವ ಸರ್ವಜ್ಞಕಲ್ಪ ಅಪೌರುಷೇಯ ವೇದವನ್ನು ಮಾನವನು ತನ್ನ ಅಲ್ಪ ಬುದ್ಧಿಯಿಂದ ಅರ್ಥಮಾಡುವುದು ಅಸಾಧ್ಯ. ಆಯೋಗ್ಯ ಪಾಶ್ಚಾತ್ಯರನೇಕರು ಆಪಾತತಃ ತೋರುವ ಅರ್ಥಗಳನ್ನು ನಿರೂಪಿಸಲು ಸಾಹಸಮಾಡಿದ್ದಾರೆ. ಆದರಲ್ಲಿ ತೋರುವ ಅನೇಕ ಕಥೆಗಳು ಕೆಲ ಒಂದು ವ್ಯಕ್ತಿಗಳು [illegible]ಲಿಂದ ವೇದಗಳ ಜನ್ಮ ಪತ್ರಿಕೆಯನ್ನು ತಯಾರಿಸಿ ಪ್ರಕಟಿಸಲಿಕ್ಕೂ ಮುಂದು ಬಂದಿರುವರು. ಇದು "ಚಿತ್ರಸೇನಾ ಇಷುಬಲಾ" ಎಂಬ ವೇದವಾಕ್ಯದಲ್ಲಿದ್ದ ಚಿತ್ರಸೇನ ಪದದ ಆಧಾರದಿಂದ ನಮ್ಮ ಮುತ್ತಜ್ಜನ ಕಂದ[illegible] ಮನೆಯ ಶಾನುಭೋಗ ಚಿತ್ರಸೇನನಿದ್ದ—ಅವನ ನಂತರ ಈ ಮಂತ್ರ ರಚಿತ ಎಂದು ಒಬ್ಬನ [illegible] ಹಾಸ್ಯಾಸ್ಪದವೇ ಸರಿ. ಈ ವಿಷಯದ ಕುರಿತು—ಅನಂತವಾದ ಕಾಲಪ್ರವಾಹದಲ್ಲಿ ಅನಾದಿ [illegible] ವೇದವು ಏಕರೀತಿಯಿಂದ ನಡೆಯುವ ಕೆಲವೊಂದು ಮುಖ್ಯ ವಿಷಯವನ್ನು ಹೇಳುವ ದಿಶೆಯಲ್ಲಿ ಅನುಪೂರ್ವಿ[illegible] ಏಕರೀತಿಯು ಅನಿವಾರ್ಯ, ಎಂದು ಈ ಹಿಂದೆಯೇ ತಿಳಿಸಿರುವೆವು. ವಸ್ತುತಃ ಅಪೌರುಷೇಯ ನಿತ್ಯ ವಾಕ್ಯವನ್ನು ಒಪ್ಪದೆ ಹೋದರೆ ಸಕಲ ಲೋಕಸಿದ್ಧ ಧರ್ಮಾರ್ಥವ್ಯವಸ್ಥೆ ಅಪ್ರಾಮಾಣಿಕವೆಂದಾದೀತು, ಅದು ಅಪ್ರಮಾಣಿಕವಾದರೆ ಲೋಕವ್ಯವಸ್ಥೆಯೇ ಬುಡಮೇಲಾದೀತು. ಈ ವಿಚಾರವನ್ನು ಸವಿಸ್ತರವಾಗಿ ಶ್ರೀಮದಾಚಾರ್ಯರು ತತ್ವನಿರ್ಣಯಾದಿಗ್ರಂಥಗಳಲ್ಲಿ ನಿರೂಪಿಸಿರುವರು. ಆದುದರಿಂದ ವೇದಗಳ ಕಾಲ ನಿರ್ಣಯ ಮಾಡುವ ಕೆಲವ ಸಂದರ್ಭವೂ ಅಸಮರ್ಥಕಾರಿಯೂ ಆಗಿದೆ. ಇನ್ನು ಮಂತ್ರಗಳಿಗೆ ಋಷಿಗಳು [illegible]ರಾಗಿದ್ದು ಅವರೇ ಕರ್ತೃಗಳೆಂದು ಅರ್ವಾಚೀನವಾದ. ಇದೂ ಸರಿಯಲ್ಲ--ತಪಸ್ಸಿನ ಶಕ್ತಿ ಯೋಗ [illegible]ಬಲದಿಂದ ಅತೀತಾನಾಗತವನ್ನು ಕರತಲಾಮಲಕವಂತೆ ಸಾಕ್ಷಾತ್ಕರಿಸಬಲ್ಲ ಪ್ರಾಚೀನ ಮಹರ್ಷಿಗಳು ಬ್ರಹ್ಮಸಮಾಧಿ ಮಗ್ನರಾದಾಗ ಅಶರೀರ ವಾಣಿಯಂತೆ ಕೇಳಿಕೊಂಡು ಮಂತ್ರಗಳನ್ನು ಕಾಣುತ್ತಾರೆ. ಪರಮಾತ್ಮನ ಇಚ್ಛೆಯಂತೆ ಅದು ಅವರವರಿಗೆ ಗೋಚರಿಸುವುದು ಇಷ್ಟರಿಂದ ಆ ಮಂತ್ರವನ್ನು ಅವರೇ ಮಾಡಿದರೆನ್ನಲಾಗದು. ಭೌತಿಕ ವಸ್ತುಶೋಧಕರು ತಮ್ಮ ವಿಜ್ಞಾನ ಸಾಮರ್ಥ್ಯದಿಂದ ಒಂದು ವಸ್ತುವನ್ನು ಭೂಗರ್ಭದಿಂದ ಶೋಧಿಸಿ ಲೋಕಕ್ಕೆ ಉಪಯೋಗಕ್ಕಾಗಿ ನೀಡುವರು. ಇದರಿಂದ ಆ ವಸ್ತುವನ್ನು ಅವನು ಮಾಡಿದನೆನ್ನಲಾಗುವುದೇ? ಸಂಶೋಧಿಸಿದವನು ಅಷ್ಟೆ. ಅಂತೆಯೇ ಶೋಧಿತ ವಸ್ತುವಿಗೆ, ಶೋಧಕನ ಹೆಸರು ಶಾಶ್ವತವಾಗಿ ನಿಲ್ಲುವಂತೆ ಆತನ ಹೆಸರನ್ನೊಳಗೊಂಡ ಅಂಕಿತ ನಾಮವನ್ನು ಇಡುವರು. ಅದರಂತೆ ಕೆಲ ಉಪನಿಷತ್ತುಗಳಿಗೂ ಸಂಹಿತೆಯೋಗಿನ

ಸೂಕ್ತಗಳಿಗೂ ಅದೇ ಹೆಸರು ಬಂದಿರುವುದು. ಇಷ್ಟರಿಂದ ಋಷಿಗಳು ಕರ್ತಾರರಲ್ಲ. ಆದ್ದರಿಂದ "ಮಂತ್ರದ್ರಷ್ಟಾ ಋಷಿಃ" ಎಂದೇ ಋಷಿ ಶಬ್ದದ ನಿರ್ವಚನವೂ ಇರುವುದು. ಇದರಿಂದ ವೇದವಾಣಿಗೆ ಕಾಲನಿರ್ಣಯ ಮಾಡುವುದು ಯುಕ್ತವಲ್ಲ.

ಆದುದರಿಂದ ಸರ್ವಾರ್ಥಪ್ರಕಾಶಕವಾದುದೂ ಅತಿಗಹನವೂ ಆದ ಈ ವೇದವನ್ನು ಅರ್ಥಮಾಡುವುದೆಂದರೆ ಸುಲಭದ ಕೆಲಸವಲ್ಲ. ವೇದ ವ್ಯಾಖ್ಯಾನ ಮಾಡುವವರು ಸರ್ವಜ್ಞಕಲ್ಪರು ಇರಬೇಕು. ಪುರಾಣ ನ್ಯಾಯ ವ್ಯಾಕರಣಾದಿಗಳಲ್ಲಿ ನಿಷ್ಣಾತರಿರಬೇಕು. ವೇದ ತಾತ್ಪರ್ಯವನ್ನು ಕಂಡು ಹಿಡಿಯುವ ಸೂಕ್ಷ್ಮಮತಿಗಳಾಗಿರಬೇಕು. ನಿಗಮಾದಿಪಾರಂಗತರಿರಬೇಕು. ಸಾವಿರಾರು ವರ್ಷಗಳ ಹಿಂದೆ ಯಾಸ್ಕ ಮುಂತಾದ ಮೇಧಾವಿ ವ್ಯಕ್ತಿಗಳು ತಮ್ಮ ಸಮಗ್ರ ಜೀವನವನ್ನೇ ಮುಡಿಪಾಗಿರಿಸಿ ವೇದಾರ್ಥೋಪಾಯವನ್ನು ಕಂಡು ಹಿಡಿಯಲು ಪ್ರಯತ್ನಿಸಿದರು. ನಿರುಕ್ತ, ಪದಪಾಠ, ಛಂದಸ್ಸಿನ ವಿಚಾರ ಮಂತ್ರಾನುಕ್ರಮಣಿಕೆ ಮುಂತಾದ ಹಲವು ಸಾಧನಗಳನ್ನು ನಿರ್ಮಿಸಿ ವೇದಾರ್ಥ ನಿರ್ಣಯಮಾಡುವವರಿಗೆ ಮಹದುಪಕಾರ ಮಾಡಿದ್ದಾರೆ. ಅವರ ಆ ಪ್ರಯತ್ನದ ಫಲವನ್ನು ಮುಂದಿನ ಮಾನವ ಪೀಳಿಗೆ ಎಂದೂ ಅಸ್ವಾದಿಸದೆ ಬಿಡುವಂತಿಲ್ಲ. ಈ ಸಾಧನಗಳನ್ನು ಅವಲಂಬಿಸಿಯೇ ಅನೇಕ ವೇದಭಾಷ್ಯಗಳು ಬೆಳಕಿಗೆ ಬಂದಿರುತ್ತವೆ. ವೇದಾರ್ಥ ಮಾಡಲಿಚ್ಛಿಸುವ ಲಾಲಸೆ ಉಳ್ಳವರಿಗೆ ಇದು ಮಾರ್ಗದರ್ಶಕವೇ ಆಗಿದೆ. ಹೀಗಿದ್ದರೂ ಇವೆಲ್ಲವು ಪರಿಪೂರ್ಣ ಸಾಧನವೆನ್ನಲಾಗದು. ಏಕೆಂದರೆ—ಅನಂತವೇದಗಳು ಓಂಕಾರವನ್ನೇ ಆಶ್ರಯಿಸಿರುವವು. ಓಂಕಾರದ ಪರಮ ಮುಖ್ಯವಾದ ಅರ್ಥ ಅನಂತ ಗುಣಗಣಾಶ್ರಯ ಪರಬ್ರಹ್ಮ. ಈ ವಿಷಯದಲ್ಲಿ ಯಾವ ವೈದಿಕನೂ ಸಂಶಯ ಪಡಲಾರ. ಅಂದ ಮೇಲೆ ವೇದದ ಪ್ರತಿಯೊಂದು ಅಕ್ಷರ, ಪದ ವಾಕ್ಯಗಳಿಗೂ ಪರಮ ಮುಖ್ಯವಾಗಿ ಶ್ರೀಪರಮಾತ್ಮನೇ ಪ್ರತಿಪಾದ್ಯನಾಗಬೇಕಲ್ಲವೆ? ಈ ದಿಶೆಯಲ್ಲಿ ವೇದವನ್ನು ವಿವರಿಸಿದರೆ ಮಾತ್ರ ವಿಸ್ಪಷ್ಟಾರ್ಥ ದೊರೆತಂತಾಗುವದು. ವೇದದಲ್ಲಿ ಬರತಕ್ಕ ಇಂದ್ರಾದಿ ಪದಗಳನ್ನೂ ಇಂದ್ರ ಮೊದಲಾದ ದೇವತಾ ಪರವಾಗಿಯೇ ಇಟ್ಟುಕೊಂಡರೆ ಆ ಪರಮ ಮುಖ್ಯಾರ್ಥಕ್ಕೆ ಎಲ್ಲಿಯ ಅವಕಾಶ? ಯಾಸ್ಕಾದಿಗಳಿಂದ ವಿರಚಿತ ನಿರುಕ್ತಾದಿಗಳ ಆಧಾರದ ಮೇಲೆ ಬರೆಯಲಾದ ಹಲವು ಭಾಷ್ಯಗಳು ಮೇಲಿಂದ ಮೇಲಕ್ಕೆ ತೋರತಕ್ಕ ಅರ್ಥಗಳನ್ನೇ ನಿರೂಪಿಸತಕ್ಕವುಗಳು. ಇಷ್ಟೇ ಅರ್ಥ ವೇದಕ್ಕೆ ಎಂದರೆ ಒಂದು ರೀತಿಯಲ್ಲಿ ಅದರ ಮಹತ್ವವನ್ನೂ ಮರೆದಂತಾಗುವುದು. ಅನಂತ ವೇದಗಳನ್ನೂ ತನ್ನ ಸ್ವರೂಪಸಾಮರ್ಥ್ಯದಿಂದಲೇ ಸರಿಯಾಗಿ ತಿಳಿದು ಅವುಗಳನ್ನು ವಿಭಾಗಿಸಿದ, ವ್ಯಾಪ್ತಜ್ಞಾನ ಮಹಾಂಶುಮಾನರೆನಿಸಿದ ವಿಜ್ಞಾನಘನ ಶ್ರೀವೇದವ್ಯಾಸರೇ ಅವುಗಳ ಪರಮ ಮುಖ್ಯ ತಾತ್ಪರ್ಯವನ್ನು ತಿಳಿಸಬಲ್ಲವರು. ಅವರೇ ಆ ವೇದಗಳ ಅರ್ಥವಿವರಣೆಗಾಗಿ ನಿರುಕ್ತ, ಸ್ವಾಧ್ಯಾಯ, ಸತ್ತರ್ಕ, ಮುಂತಾದ ಹಲವು ಆಧಾರ ಗ್ರಂಥಗಳನ್ನು ಮಾಡಿ ಆಗಾಗ್ಗೆ ಅವತರಿಸಿ ಲೋಕೋಪಕಾರ ಮಾಡುವರು. ಆ ಗ್ರಂಥಗಳೊಂದೂ ನಮ್ಮ ಪ್ರಾಚೀನ ಯಾಸ್ಕ ಪ್ರಭೃತಿಗಳಿಗೆ ದೊರೆತಂತೆ ಕಾಣುವುದಿಲ್ಲ. ಶ್ರೀ ವ್ಯಾಸರು ವೇದಗಳಿಗೆ ಮುಖ್ಯತಃ ನಿಖಿಲಗುಣ ಪರಿಪೂರ್ಣಬ್ರಹ್ಮ, ಅಧಿದೈವ, ಅಧ್ಯಾತ್ಮ, ಎಂದು ಮೂರು ವಿಧವಾಗಿ ಅರ್ಥ ಮಾಡಿದವರು. ಬ್ರಹ್ಮಮೀಮಾಂಸೆಯಲ್ಲಿ ಈ ವಿಚಾರವನ್ನು ಅವರೇ ಸ್ಪಷ್ಟಪಡಿಸಿರುವರು. ಸುಮಾರು 800, ವರ್ಷಗಳ ಹಿಂದೆ ಅವತರಿಸಿದ ವಾಯ್ವಂಶಸಂಭೂತರಾದ ಶ್ರೀ ಮಧ್ವಾಚಾರ್ಯರವರು ಈ ಗ್ರಂಥಗಳನ್ನೆಲ್ಲ ಶೋಧಿಸಿರುವರು. ಸಾಕ್ಷಾದ್ವೇದವ್ಯಾಸರ ಮುಖ್ಯ ಶಿಷ್ಯರಾದುದರಿಂದ ಅವರಿಗೆ ಈ ಅವಕಾಶ ದೊರೆಯಿತು. 'ವ್ಯಾಸಾಜ್ಞಯಾ ಭಾಷ್ಯಮಿದಂ ವಿಧಾಯ, ತಸ್ಯೈವ ಶಿಷ್ಯೋ ಜಗದೇಕ ಭರ್ತುಃ' ಎಂದು ತಾನೇ ತಾತ್ಪರ್ಯ ನಿರ್ಣಯದಲ್ಲಿ ಹೇಳಿಕೊಂಡಿರುವರು. ಅವರ ಕಾಲದಲ್ಲಿದ್ದ ವೇದ ಭಾಷ್ಯಗಳು ಸಂಪೂರ್ಣ ಅರ್ಥವನ್ನು ಕೊಡುವದಲ್ಲ. ಅಲ್ಲದೆ ತಸ್ಮಾತ್ ವೇದ ತಾತ್ಪರ್ಯ ವಿರುದ್ಧಗಳಾಗಿಯೂ ಇವೆಯೆಂದು ಅವರು ತಿಳಿದರು. ವ್ಯಾಸನಿರ್ಮಿತ ನಿರುಕ್ತಾದಿಗಳ ಆಧಾರದ ಮೇಲೆ ವೇದಕ್ಕೆ ಹೇಗೆ ಅರ್ಥಮಾಡಬೇಕೆಂಬುದನ್ನು ಋಗ್ವೇದದ ನಲ್ವತ್ತು ಸೂಕ್ತಗಳಿಗೆ ಭಾಷ್ಯ ಬರೆದು ದಿಗ್ದರ್ಶನ ಮಾಡಿದರು. ಆಚಾರ್ಯರು ತಮ್ಮ ಋಗ್ಭಾಷ್ಯದಲ್ಲಿ ವೇದಗಳಿಗೆ ಪರಬ್ರಹ್ಮ, ಅಧಿದೈವ, ಅಧ್ಯಾತ್ಮ ಎಂಬ ಅರ್ಥತ್ರಯಗಳು ಹೇಗೆ ಹೊಂದಿಕೊಳ್ಳುತ್ತವೆ ಎಂಬುದನ್ನು ಸಾಧಾರವಾಗಿ ನಿರೂಪಿಸಿರುವರು.

ಇದನ್ನು ವ್ಯಾಖ್ಯಾನಮಾಡಿದ ಮಹಾಮೇಧಾವಿಗಳಾದ ಶ್ರೀಮಜ್ಜಯತೀರ್ಥರು ಈಗ ಪ್ರಚಲಿತವಾಗಿರುವ ಸಾಯಣಭಾಷ್ಯವನ್ನೂ ಕೆಲವು ಕಡೆ ವಿಮರ್ಶಿಸಿದ್ದಾರೆ. ಯಾಸ್ಕಾದಿಗಳ ಗ್ರಂಥಗಳಲ್ಲಿದ್ದ ನ್ಯೂನತೆಯನ್ನೂ ಪರಿಶೀಲಿಸಿರುವರು.

ಶ್ರೀಮದಾಚಾರ್ಯರ ಭಾಷ್ಯವು ವೇದಗಳ ಸಾವಿರಾರು ಶಾಖೆಗಳ ಮತ್ತು ವೇದವ್ಯಾಸಕೃತ ಮೂಲ ಗ್ರಂಥಗಳ ಆಧಾರದ ಮೇಲೆ ಬರೆದದ್ದಾಗಿದೆ. ಇದು ಪರಮಮುಖ್ಯವಾಗಿ ಶ್ರೀ ವಿಷ್ಣುವನ್ನೂ ನಾನಾ ಗುಣೋತ್ಕರ್ಷ ಪ್ರತಿಪಾದಕ ಮುಖದಿಂದ ವೇದಗಳು ಏಕಕಂಠದಿಂದ ಸ್ತೋತ್ರ ಮಾಡುತ್ತವೆ, ಎಂಬುದನ್ನು ಪ್ರತ್ಯಕ್ಷಪಡಿಸುತ್ತದೆ. ಎರಡನೇ ಮುಖ್ಯವಾಗಿ ಆವಾವ ಇಂದ್ರಾದಿ ದೇವತೆಗಳನ್ನು ಹೇಗೆ ತಿಳಿಸುವವೆಂಬುದನ್ನು ವಿಶದಪಡಿಸುತ್ತದೆ. ಮೂರನೆಯದಾಗಿ ಅಧಿಕಾರಿಯಾದ ಮುಮುಕ್ಷುವು ಮಾನಸ ಜ್ಞಾನಯಜ್ಞವನ್ನು ಹೇಗೆ ನಿರ್ವಹಿಸಬೇಕೆಂಬುದನ್ನೂ ವಿವರಿಸುತ್ತದೆ. ಈ ತರದ ಭಾಷ್ಯವು ಜಗತ್ತಿನಲ್ಲಿ ಅನಂತಕಾಲ ಪ್ರವಾಹದಲ್ಲಿ ಇದುವರೆಗೆ ಯಾರಿಂದಲೂ ನಿರ್ಮಿತವಾಗಿಲ್ಲ. ಇದು ಶ್ಲೋಕರೂಪವಾಗಿದ್ದು ಕಂಠಪಾಠ ಮಾಡಿಕೊಳ್ಳಲು ಅನುಕೂಲವಾಗಿದೆ ಅಲ್ಲದೆ ಪರಿಮಿತವಾಗಿ ವ್ಯಾಕರಣ ನಿರುಕ್ತ, ಛಂದಸ್ಸು, ಋಷಿ ದೇವತಾ, ಮುಂತಾದ ಅವಶ್ಯಾಪೇಕ್ಷಿತ ಪ್ರಮೇಯಗಳಿಂದಲೂ ಒಳಗೊಂಡಿದೆ. ಇದು ಭಾಷ್ಯಕಾರರಾದ ಶ್ರೀ ಆಚಾರ್ಯರ ಅತ್ಯದ್ಭುತ ಮೇಧಾಶಕ್ತಿಯು, ಮತ್ತು ಅನಂತ ಶಾಖಾವೇತ್ತೃತ್ವದ ದ್ಯೋತಕವಾಗಿದೆ. ವೇದದ ಸಂಪೂರ್ಣ ಭಾಗಕ್ಕೆ ಭಾಷ್ಯವಿಲ್ಲ ಎಂಬ ನ್ಯೂನತೆಯುಳ್ಳದೆ, ಇದ್ದ ಭಾಗವು ಪೂರ್ಣವಾಗಿ ಸರ್ವಾಂಗ ಸುಂದರವೆನ್ನಲು ಅಡ್ಡಿಯಿಲ್ಲ. ತಾವು ರಚಿಸಿದ ಭಾಷ್ಯಭಾಗವನ್ನು ಸಂಪೂರ್ಣ ಮನನ ಮಾಡಿದರೆ ವೇದಗಳ ಯಾವ ಭಾಗವನ್ನೂ ಬುದ್ಧಿವಂತನು ಅರ್ಥಮಾಡಿಕೊಳ್ಳಬಹುದೆಂದು ಅವರು ಅಷ್ಟರಲ್ಲೇ ಬಿಟ್ಟಿರಬೇಕು. ಅಥವಾ ಅಧ್ಯಾತ್ಮಿಕೆಯಲ್ಲಿ ಜನತೆಯ ಪ್ರವೃತ್ತಿ ಮುಂದಿನ ಕಾಲಾಂಗದಲ್ಲಿ ಇಳಿಮುಖವಾಗಿರುವದರಿಂದ ಇಷ್ಟರಿಂದಲೇ ಅಲಂಬುದ್ಧಿ ಉಂಟಾಯ್ತೆಂದೂ ಹೇಳಬಹುದು. ಏನೇ ಇರಲಿ, ಈ ಋಗ್ಭಾಷ್ಯವನ್ನು ಚೆನ್ನಾಗಿ ಓದಿ ಮನನ ಮಾಡಿದರೆ ಜೀವನ ಸಾರ್ಥಕ, ಕೃತಕೃತ್ಯ ಎಂದೆನಿಸಲು ಯಾವ ಅಭ್ಯಂತರವೂ ಇಲ್ಲ

ಪ್ರಕೃತ ಈ ಗ್ರಂಥವು ಸಂಸ್ಕೃತ ಭಾಷೆಯಲ್ಲಿರುವುದರಿಂದ ಇತರ ಸವಿ ಸಂಸ್ಕೃತ ವಿದ್ವಾಂಸರ ಪಾಲಿಗೇನೇ ಎಂದಿಲ್ಲ. ಒಂದು ದೃಷ್ಟಿಯಲ್ಲಿ ಇದು ಸಂಸ್ಕೃತಾನಭಿಜ್ಞರಿಗೆ ದೊಡ್ಡ ನಷ್ಟವೆನ್ನಬಹುದು. ಮಧ್ವಮುನಿ ಸೇವಾಸಂಘದ ಕಡೆಯಿಂದ ಪ್ರಚೋದಿತರಾದ ನಮ್ಮ ಮಠದ ಆಸ್ಥಾನ ವಿದ್ವಾನ್ ಶ್ರೀ ಅಗ್ರಹಾರ ನಾರಾಯಣ ತಂತ್ರಿಗಳು ಸರಳ ಕನ್ನಡ ಭಾಷೆಯಲ್ಲಿ ಇದರ ಅನುವಾದಮಾಡಿ ಈ ನಷ್ಟವನ್ನು ತುಂಬಿಸಿದ್ದಾರೆ. ಶ್ರೀ ತಂತ್ರಿಗಳು ತಮ್ಮ ಜೀವಿತಕಾಲವನ್ನು ಬಹುಮಟ್ಟಿಗೆ ಮಾಧ್ವಗ್ರಂಥಗಳ ಅನುವಾದಕ್ಕೇ ಉಪಯೋಗಿಸಿಕೊಂಡವರೆಂದರೆ ತಪ್ಪಾಗದು. ಅವರೀಗ ಶ್ರೀಮದಾಚಾರ್ಯ ವಿರಚಿತ ಋಗ್ಭಾಷ್ಯವನ್ನು ಸರಳ ಶೈಲಿಯಿಂದ ಕನ್ನಡ ಭಾಷೆಯಲ್ಲಿ ಅನುವಾದಿಸಿ ನವಗೊಂದು ಕೃತಿಯನ್ನು ತೋರಿಸಿದರು ಒಂದು ಮುನ್ನುಡಿಯನ್ನು ಬರೆಸಿ ಅನುಗ್ರಹಿಸಬೇಕೆಂದೂ ಶ್ರೀಮಧ್ವಮುನಿ ಸೇವಾಸಂಘದ ಪರವಾಗಿ ಕೇಳಿಕೊಂಡರು. ಶ್ರೀಮನ್ಮಧ್ವಾಚಾರ್ಯರವರ ಗ್ರಂಥಗಳಿಗೆ ಪ್ರಚಾರಾತ್ಮಕ ಮುನ್ನುಡಿಯಾಗುವ ವ್ಯಾಪಾರಕ್ಕೆ ನಿಜವಾಗಿಯೂ ದೇವತೆಗಳೇ ಮುಖ್ಯಾಧಿಕಾರಿಗಳು. ನಮ್ಮಂಥವರು ಆ ಕುರಿತು ಕೈಹಾಕುವುದು "ಯನ್ಮಾದೃಶೋಽಪಿ ಯತತೇ ತದತೀವ ಹಾಸ್ಯಂ" ಎಂದಾಗದಿರದು. ಆದರೂ ನಮ್ಮ ಶ್ರೀಯುಗ್ಸನ್ನಪೇಕ್ಷಿಸಿ ಈ ಎರಡು ಮಾತನ್ನು ಮುನ್ನುಡಿಯಾಗಿ ಮುಂದಿರಿಸಿರುವೆವು. ಪ್ರಕೃತ ಈ ಅನುವಾದವು ಕನ್ನಡಕ್ಕೊಂದು ಅಪೂರ್ವ ಕೃತಿಯಾಗಿದೆ. ಶಾಸ್ತ್ರೀಯ ಮೂಲ ತತ್ವಗಳನ್ನು ಭಾಷೆಯಲ್ಲಿಳಿಸುವುದು ಸುಲಭದ ಕೆಲಸವಲ್ಲ. ಶ್ರೀಮಧ್ವಸಿದ್ಧಾಂತದ ಅವಿರತ ಸೇವೆಯನ್ನು ಕೈಗೊಂಡ ನಮ್ಮ ಶ್ರೀ ತಂತ್ರಿಗಳ ಪ್ರವೃತ್ತಿ ಸರ್ವಥಾ ಅಭಿನಂದನೀಯವು. ಇವರೀಗ ಕೊನೆಯದಾಗಿ ಆಚಾರ್ಯರ "ಯುಕ್ತಿ ಪ್ರಮಾಣಕಲ್ಪ" ಎಂಬ ಗ್ರಂಥವನ್ನು ಅನುವಾದಿಸಲುಪಕ್ರಮಿಸುವರು. ಈ ಪವಿತ್ರಕೃತಿಯು ಬೇಗನೇ ಬೆಳಕಿಗೆ ಬಂದು ಶ್ರೀಮದಾಚಾರ್ಯರ ಸರ್ವಮೂಲಗ್ರಂಥಗಳ ಭಾಷಾನುವಾದವು ತಂತ್ರಿಗಳಿಂದಾಗಿ ಸಂಪೂರ್ಣವಾಯ್ತು, ಎಂದೆನ್ನುವಂತೆ ಶ್ರೀದೇವರು ಅವರಿಗೆ ಆಯುರಾರೋಗ್ಯಾದಿ ಸಂಪತ್ತನ್ನು ಅನುಗ್ರಹಿಸಲಿ ಎಂದು

ನಮ್ಮ ಉಪಾಸ್ಯಮೂರ್ತಿ ಶ್ರೀಕೃಷ್ಣ ನೃಸಿಂಹರನ್ನು ಪ್ರಾರ್ಥಿಸುವೆವು. ಜನತೆ ಈ ಕೃತಿಯನ್ನು ಗೌರವಾದರಗಳಿಂದ ಸ್ವಾಗತಿಸಿಕೊಂಡು ಅದರಲ್ಲಿ ನಿರೂಪಿತವಾದಂತೆ ವೇದಾರ್ಥ ಜ್ಞಾನವನ್ನು ಸಂಪಾದಿಸಿಕೊಂಡು ಕೃತಾರ್ಥವಾಗಲೆಂದೂ ಹಾರ್ದಿಕವಾಗಿ ಹರಸಿ, ನಮ್ಮ ಮುನ್ನುಡಿಯ ಎರಡುನುಡಿಯನ್ನು ಶ್ರೀಮುಖ್ಯಪ್ರಾಣಾಂತರ್ಗತ ಶ್ರೀನೃಸಿಂಹನಿಗರ್ಪಿಸಿ ಉಪರಮಿಸುವೆವು. ಓಂ ಸ್ವಸ್ತಿ!

ಯಸ್ಸರ್ವಗುಣಸಂಪೂರ್ಣಃ ಸರ್ವದೋಷವಿವರ್ಜಿತಃ ।
ಪ್ರೀಯತಾಂ ಪ್ರೀತ ಏವಾಲಂ ವಿಷ್ಣುರ್ಮೇ ಪರಮಃ ಸುಹೃತ್ ॥

ಪ್ಲವಂಗ ಆಷಾಢ
ಬಹುಳ ೧೧
ದಿನಾಂಕ
2—7—67

ಶ್ರೀ ಶ್ರೀ ೧೦೮ ಶ್ರೀ ಪರಮಹಂಸೇತ್ಯಾದಿ ಬಿರುದಾಂಕಿತರಾದ
ಪ್ರಕೃತ ಪರ್ಯಾಯ ಪೀಠಾಧಿರೂಢರಾದ ಕಾಣಿಯೂರು
ಮಠದ ಶ್ರೀ ವಿದ್ಯಾವಾರಿನಿಧಿತೀರ್ಥ ಶ್ರೀಪಾದಂಗಳವರು.

|| ಶ್ರೀಃ ||

# ಋಗ್ಭಾಷ್ಯ

ನಾರಾಯಣಾಭಿದಂ ಜ್ಯೋತಿಃ ಪ್ರತ್ಯೂಹಧ್ವಾಂತಶಾಂತಿಕೃತ್ ।
ಕಮಲಾಕಮಲಾನಂದವಂತಃ ಸ್ವಾಂತಮುಪಾಸ್ಮಹೇ ॥
ಅಶೇಷಗುಣಸಂಪೂರ್ಣಂ ಸರ್ವದೋಷವಿವರ್ಜಿತಂ ।
ಅನಂತಾವಾಮ್ನಾಯಸಂವೇದ್ಯಂ ವಂದೇಽಹಂ ಕಮಲಾಪತಿಂ ॥
ಅಶೇಷ ಪ್ರಾಣಿನಾಂ ನೇತಾ ಯೇನ ಸಂಪ್ರೋಚ್ಯತೇ ಹರಿಃ ।
ತಸ್ಯ ವಾಯೋಸ್ತೃತೀಯಾಂ ತದ್ರೂಪಂ ಮಧ್ವಾಭಿಧಂ ಭಜೇ ॥
ಮೂಕೋಽಪಿ ವಾಗ್ಮಿತಾಂ ಯಸ್ಯಯಾದ್ಯದನುಗ್ರಹಪಾತ್ರತಃ ।
ಸೇವೇ ತಂ ಜಯಯೋಗೀಂದ್ರಂ ಪ್ರತಿವಾದಿಮತಚ್ಛಿದಂ ॥
ಅಥ ತದ್ದಾಸದಾಸೇನ ತಂತ್ರಿನಾರಾಯಣೇನ ಚ
ಋಷಿಛಂದೋದೇವತೋಕ್ತಿಪದಾರ್ಥಾನ್ವಯಪೂರ್ವಿಕಾ ।
ಋಗ್ಭಾಷ್ಯವಿವೃತೇರ್ವ್ಯಾಖ್ಯಾ ಕ್ರಿಯತೇ ಪ್ರೀತಯೇ ಹರೇಃ ॥

ಶ್ರೀಮದ್ಧನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ
ಲಕ್ಷ್ಮೀಹಯಗ್ರೀವಾಯ ನಮಃ ॥

**ಭಾಷ್ಯ** ॥ ಓಂ ॥ ನಾರಾಯಣಂ ನಿಖಿಲಪೂರ್ಣಗುಣಾರ್ಣವೋಚ್ಚಸೂರ್ಯಾಮಿತದ್ಯುತಿಮಶೇಷನಿರಸ್ತದೋಷಂ । ಸರ್ವೇಶ್ವರಂ ಗುರುಮಜೇಶನುತಂ ಪ್ರಣಮ್ಯ ವಕ್ಷ್ಯೇ ಋಗರ್ಥಮತಿತುಷ್ಟಿಕರಂ ತದಸ್ಯ ॥

ಅ ॥ ನಿಶ್ಶೇಷಗಳೂ, ಪ್ರಪ್ರತ್ಯೇಕ ಪೂರ್ಣಗಳೂ ಆದ ಜ್ಞಾನ ಆನಂದಾದಿ ಗುಣಗಳಿಂದ ಸಮುದ್ರದಂತಿರುವವನೂ, ಸಂಪೂರ್ಣವಾಗಿ ಪ್ರಕಾಶವನ್ನು ಹೊಂದಿರುವ ಅಪರಿಮಿತ ಸೂರ್ಯರ ಪ್ರಕಾಶದಂತೆ ಪ್ರಕಾಶವುಳ್ಳವನೂ, ಅಥವಾ ಅಪರಿಮಿತ ಸೂರ್ಯರಿಂದಲೂ ದೃಷ್ಟಾಂತೀಕರಿಸಲಿಕ್ಕೆ ಅಶಕ್ಯವಾದ (ಅಂದರೆ ಅಪರಿಮಿತ ಸೂರ್ಯರಿಗಿಂತಲೂ ಅತಿಶಯವಾದ) ಪ್ರಕಾಶವುಳ್ಳವನೂ, ಸಂಪೂರ್ಣವಾಗಿ ಸರ್ವದಾ ದೋಷಗಳನ್ನು ಹೋಗಲಾಡಿಸುವವನೂ, ಚೇತನಾಚೇತನ ಜಗತ್ತಿಗೆ ನಿಯಾಮಕನೂ, ಜ್ಞಾನೋಪದೇಶಕನೂ, ಬ್ರಹ್ಮರುದ್ರಾದಿದೇವತೆಗಳಿಂದ ನಮಸ್ಕರಿಸಲ್ಪಡುವವನೂ, ಆದ ಶ್ರೀ ನಾರಾಯಣನನ್ನು ಭಕ್ತಿಪೂರ್ವಕವಾಗಿ ನಮಸ್ಕರಿಸಿ ಯಾವ ಕಾರಣದಿಂದ ಋಗರ್ಥವಚನಾದಿಗಳು ಈ ಶ್ರೀ ನಾರಾಯಣನಿಗೆ ಅತಿ ಸಂತೋಷವನ್ನು ಹುಟ್ಟಿಸತಕ್ಕವುಗಳೋ, ಆದಕಾರಣ ಕೆಲವು ಋಕ್ಕುಗಳ ಅರ್ಥವನ್ನು ಹೇಳುವೆನು. ಅಥವಾ ಹಿಂದೆ ಹೇಳಿದ ಲಕ್ಷಣಗಳುಳ್ಳ ಬುದ್ಧಿಸನ್ನಿಹಿತನಾದ ಶ್ರೀ ನಾರಾಯಣನಿಗೆ ಪರಮಸಂತೋಷವನ್ನು ಹುಟ್ಟಿಸತಕ್ಕ ಕೆಲವು ಋಕ್ಕುಗಳ ಅರ್ಥವನ್ನು ಹೇಳುವೆನು.

ವಿ || ಸಂಸಾರ ಸಮುದ್ರವನ್ನು ದಾಟಲಿಚ್ಛಿಸುವವರು ಭಗವತ್ಪ್ರಸಾದವನ್ನು ಪ್ರಾರ್ಥಿಸಬೇಕು. ಆ ಪ್ರಸಾದವು ಭಗವಂತನ ಜ್ಞಾನವಿಲ್ಲದೆ ಕೂಡಲಾರದು. ಆ ಭಗವಂತನ ಜ್ಞಾನಕ್ಕಾಗಿಯೇ ನಿಖಿಲ ವೇದಗಳೂ ಪ್ರವೃತ್ತಗಳಾಗಿವೆ. ಅವುಗಳೆಲ್ಲವೂ ಭಗವತ್ಪರಗಳೇ ಎಂದು ತೋರಿಸುವುದಕ್ಕಾಗಿ ಅಂದರೆ ಕೆಲವು ಋಕ್ಕುಗಳು ಭಗವತ್ಪರಗಳೆಂದು ತಿಳಿದರೆ ಸಮಸ್ತ ವೇದವೂ ಭಗವತ್ಪರವೆಂದು ಬುದ್ಧಿವಂತರಿಗೆ ವ್ಯಾಖ್ಯಾನ ಮಾಡಲಿಕ್ಕೆ ಶಕ್ಯವಾಗುವುದೆಂಬ ಅಭಿಪ್ರಾಯದಿಂದ ಕೆಲವು ಋಕ್ಕುಗಳಿಗೆ ಮಾತ್ರ ಭಾಷ್ಯವನ್ನು ಮಾಡುತ್ತಾ ಶ್ರೀಮದಾಚಾರ್ಯರು ಪ್ರಾರಿಪ್ಸಿತವಾದ ಗ್ರಂಥವು ನಿರ್ವಿಘ್ನವಾಗಿ ಸಮಾಪ್ತಿಯಾಗುವುದಕ್ಕಾಗಿಯೂ ಲೋಕದಲ್ಲಿ ಪ್ರಸಿದ್ಧಿ ಬರುವುದಕ್ಕಾಗಿಯೂ ಶ್ರೀ ನಾರಾಯಣನಿಗೆ ನಮಸ್ಕಾರಸ್ತೋತ್ರರೂಪಮಂಗಳವನ್ನು ಮಾಡುತ್ತಾ ಪ್ರಯೋಜನವನ್ನು ತೋರಿಸಿದರು. || ೧ ||

ಋಕ್ || ಓಂ || ಅಗ್ನಿಮೀಳೇ ಪುರೋಹಿತಂ ಯಜ್ಞಸ್ಯ ದೇವಮೃತ್ವಿಜಂ ।
ಹೋತಾರಂ ರತ್ನಧಾತಮಮ್ || ೧ ||

ಅ || ಪುರೋಹಿತಂ=ಅನಾದಿಯಿಂದ ಸರ್ವಪ್ರಾಣಿಗಳಿಗೂ ಅನುಕೂಲನಾದವನು, ಸರ್ವರಿಗೂ ಪ್ರಭುವಾದವನು, ಯಜ್ಞಸ್ಯ ಋತ್ವಿಜಂ=ಜ್ಯೋತಿಷ್ಟೋಮಾದಿ ಯಾಗಗಳನ್ನು ಮಾಡುವುದರಿಂದ ಋತ್ವಿಕ್ ಎಂದು ಹೆಸರುಳ್ಳ ಅಧ್ವರ್ಯು ಹೋತೃ ಉದ್ಗಾತೃ ಮೊದಲಾದವರಲ್ಲಿ ನಿಯಾಮಕನಾಗಿ ಇದ್ದುದರಿಂದ ಋತ್ವಿಕ್ ಎಂದು ಹೆಸರುಳ್ಳವನು, ಹೋತಾರಂ=ತದ್ಯೇಯಂ ವಾಕ್‌ಸೋಽಯಮಗ್ನಿಃ ಸ ಹೋತಾ ಎಂಬ ಶ್ರುತಿಯಿಂದ ಹೋತನಿಗೆ ನಿಯಾಮಕನಾಗಿ ಆತನಲ್ಲಿ ವಿಶೇಷತಃ ಸನ್ನಿಹಿತನಾಗಿರುವುದರಿಂದ ಹೋತೃ ನಾಮಕನೂ, ರತ್ನಧಾತಮಂ=ನಿರವಧಿಕ ಆನಂದ ಸ್ವರೂಪನೂ, ಅಥವಾ ಧನಾಢ್ಯನೂ, ದೇವಂ=ಕ್ರೀಡಾದಿಕರ್ತನೂ, ಅಥವಾ ಸರ್ವರಿಂದ ಸ್ತುತ್ಯನೂ, ಆದ ಅಗ್ನಿಂ=ಸಮಸ್ತ ಪೂಜ್ಯರಿಗಿಂತಲೂ ಪ್ರಥಮ ಪೂಜ್ಯನೂ, ಅಥವಾ ಸರ್ವೋತ್ತಮನೂ, ಪ್ರಥಮತಃ ಪ್ರವರ್ತಕನೂ, ಆದ ಅಗ್ನಿನಾಮಕ ಶ್ರೀವಿಷ್ಣುವನ್ನೂ, ಆತನಿಗೆ ಅಧಿಷ್ಠಾನಭೂತನಾದ ಪ್ರಸಿದ್ಧಾಗ್ನಿಯನ್ನಾಗಲೀ ಈಳೇ=ಸ್ತುತಿಸುತ್ತೇನೆ. (ಇಲ್ಲಿ ಹೇಳಿದ ಎಲ್ಲಾ ಗುಣಗಳೂ ಶ್ರೀಹರಿಯಲ್ಲಿ ನಿರವಧಿಕಗಳು. ಅಗ್ನಿಯಲ್ಲಿ ಯಥಾಯೋಗ್ಯವಾದುದು.) (ಈ ಮಂತ್ರವು ಸರ್ವರಿಂದಲೂ ಅಪೇಕ್ಷಿತವಾದ ಸುಖವನ್ನು ಕೊಡತಕ್ಕ ಶ್ರೀಹರಿಯ ಉಪಾಸನೆಗೆ ವಿಷಯಭೂತವಾದ ನಿರತಿಶಯ ಸುಖಸ್ವರೂಪವಾದ ಮಹಾಗುಣವನ್ನು ಪ್ರತಿಪಾದಿಸುವುದರಿಂದ ಈ ಅಗ್ನಿ ಸೂಕ್ತವನ್ನು ಪ್ರಥಮತಃ ಹೇಳಿದ್ದು. (ಅಧ್ಯಾತ್ಮಪರವಾದ ಅರ್ಥವು) ಪುರೋಹಿತಂ=ಅನಾದಿಯಿಂದ ಸರ್ವರಿಗೂ ಅನುಕೂಲನಾದವನು, ಯಜ್ಞಸ್ಯ=ಜ್ಞಾನಯಜ್ಞಕ್ಕೆ ಪ್ರವರ್ತಕನಾಗಿ, ಋತ್ವಿಜಂ=ಋತ್ವಿಕ್‌ಭೂತರಾದ ಇಂದ್ರಿಯಾಭಿಮಾನಿಗಳಿಗೆ ನಿಯಾಮಕನಾಗಿದ್ದುದರಿಂದ ಋತ್ವಿಕ್ ನಾಮಕನು, ಹೋತಾರಂ=ಇಂದ್ರಿಯಾಖ್ಯ ಅಗ್ನಿಗಳಲ್ಲಿ ವಿಷಯರೂಪ ಹವಿಸ್ಸುಗಳನ್ನು ಹೋಮಿಸುವವನು, (ಅಂದರೆ ವಿಷಯಭೋಗವನ್ನು ಕೊಡುವವನು,) ಅಗ್ನಿಂ ಚ=ಸರ್ವರ ಶರೀರಗಳಿಗೆ ಪ್ರವರ್ತಕನು, ಇಂತಹ ಶ್ರೀಹರಿಯನ್ನು ಸ್ತುತಿಸುತ್ತೇನೆ.

ಅಧ್ಯಾತ್ಮಂ=(ಶರೀರ ನಿಯಾಮಕ ಭಗವದ್ರೂಪವು) (ಅಧ್ಯಾತ್ಮ ಜ್ಞಾನ ಯಜ್ಞದಲ್ಲಿ ಸರ್ವತ್ರ ಮೋಕ್ಷ ಸಾಧಕನಾದವನು ಯಾವನೊಬ್ಬ ಸಾತ್ವಿಕನಾದ ಜೀವನೇ ಯಜಮಾನನು) ಜ್ಞಾನಾರ್ಥಿಗೆ ಜ್ಞಾನವನ್ನು ಕೊಡುತ್ತಾ ಸಮಸ್ತ ಇಂದ್ರಿಯಗಳಿಗೆ ಪ್ರೇರಕನೂ ಯಥೋಚಿತ ಭೋಗಪ್ರದನೂ ಆದ ಶ್ರೀವಿಷ್ಣುವಿನ ಸ್ತುತಿಯು ಯುಕ್ತವೆಂದು ಸ್ತುತ್ಯತ್ವವನ್ನು ಪ್ರತಿಪಾದಿಸುವುದೇ ವಿಶೇಷಣಗಳಿಗೆ ಕೃತ್ಯವು. || ೧ ||

ವಿ ॥ (1) ಋಕ್ಶಾಖೆಯಲ್ಲಿ (೧೦೦೧) ಒಂದು ಸಹಸ್ರದ ಒಂದು ಸೂಕ್ತಗಳು. ಅವುಗಳ ಮಧ್ಯದಲ್ಲಿ ಶ್ರೀಭಗವತ್ಪಾದರು (1) ಅಗ್ನ್ಯಾದಿ ದೇವತಾ, (2) ತದಂತರ್ಗತ ವಿಷ್ಣು, (3) ಅಧ್ಯಾತ್ಮ, ಹೀಗೆ ಮೂರು ಅರ್ಥಪರವಾಗಿ (೪೦) ನಲ್ವತ್ತು ಸೂಕ್ತಗಳಿಗೆ ಮಾತ್ರ ವ್ಯಾಖ್ಯಾನ ಮಾಡಿರುವರು.

(2) ಆದರಲ್ಲಿ ಕೆಲವರು ಆಯಾಯ ಕರ್ಮಗಳಲ್ಲಿ ವಿನಿಯುಕ್ತಗಳಾದ ಮಂತ್ರಗಳಿಗೆ ಶಬ್ದ ಸಾಮರ್ಥ್ಯ ರೂಪಲಿಂಗದಿಂದಲೂ ಆಯಾಯ ಪ್ರಕರಣಗಳಿಂದಲೂ ಆಯಾಯ ದೇವತಾರೂಪ ಅರ್ಥವೇ ಉಚಿತವು. ವಿಷ್ಣ್ವಾದಿ ರೂಪವಾದ ಅರ್ಥವು ಯೋಗ್ಯವಲ್ಲ. ಏಕೆಂದರೆ—ಆ ವಿಷಯದಲ್ಲಿ (೧) ಪ್ರಮಾಣವಿಲ್ಲ. (೨) ಮತ್ತು ಒಂದು ಶಬ್ದಕ್ಕೆ ಅನೇಕಾರ್ಥ ಹೇಳುವುದು ಅನ್ಯಾಯವೂ ಆಗಿದೆ. (೩) ಅಲ್ಲದೆ ಸರ್ವಸೂಕ್ತಗಳೂ ವಿಷ್ಣು ಸೂಕ್ತ ಗಳೆಂದೇ ಆಗಬೇಕಾಗಿರುವುದರಿಂದ ಇದು ಆಗ್ನೇಯಸೂಕ್ತವು, ಇದು ಐಂದ್ರಸೂಕ್ತವು, ಇತ್ಯಾದಿ ವ್ಯವಸ್ಥೆಯೂ ಕೂಡದೆ ಹೋಗುವುದು. (೪) ಮತ್ತು ಒಂದು ಶಬ್ದಕ್ಕೆ ಅನೇಕಾರ್ಥಗಳನ್ನು ಹೇಳಿದರೆ ಶಕ್ತಿಯುಕ್ತ ವಾಕ್ಯಭೇದವೂ ಬರಬೇಕಾಗುವುದು, ಎಂದು ಆಕ್ಷೇಪಿಸುವರು.

(3) ಇದಯುಕ್ತವು ಏಕೆಂದರೆ–ಆ ವಿಷಯದಲ್ಲಿ ಹೀಗೆ ಸಮಾಧಾನವು. (೧) ಓಮಿತಿ ಬ್ರಹ್ಮ ಇತ್ಯಾದಿ ಶ್ರುತಿ, (೨) ಓಂತತ್ಸದಿತಿ ನಿರ್ದೇಶೋ ಬ್ರಹ್ಮಣಸ್ತ್ರಿವಿಧಃ ಸ್ಮೃತಃ, ಇತ್ಯಾದಿ ಸ್ಮೃತಿ, (೩) ಓಂಕಾರೋ ಬ್ರಹ್ಮವಾಚೀ ತನ್ನಿಷ್ಠಧರ್ಮಪ್ರವೃತ್ತಿಹೇತುಕತ್ವಾತ್, ಇತ್ಯಾದ್ಯನುಮಾನ, ಇವುಗಳಿಂದ ಓಂಕಾರವು ಬ್ರಹ್ಮರೂಪ ಅರ್ಥವನ್ನು ಹೇಳುತ್ತದೆ. ಬ್ರಹ್ಮನು ಗುಣಪರಿಪೂರ್ಣನು. ಬ್ರಹ್ಮನೇ ಶ್ರೀವಿಷ್ಣುವು ಓಂಕಾರೇಣ ಸರ್ವಾ ವಾಕ್ ಸಂತೃಣ್ಣಾ ಎಂಬ ಛಂದೋಗ ಶ್ರುತಿ, ಇವುಗಳಿಂದ ವೇದಗಳೆಲ್ಲವೂ ಓಂಕಾರದ ವ್ಯಾಖ್ಯಾನವು. ತಥಾ ಚ (೪) ವಿಷ್ಣುಃ ಸರ್ವವೇದಪ್ರತಿಪಾದ್ಯಃ ತದ್ವ್ಯಾಖ್ಯೇಯೋಂಕಾರಾರ್ಥತ್ವಾತ್ ಯೋ ಯದ್ವ್ಯಾಖ್ಯೇಯಾರ್ಥಃ ಸ ತದ್ವ್ಯಾಖ್ಯಾನಪ್ರತಿಪಾದ್ಯಃ ಯಥಾ ಸಂಮತಃ. (೫) ವೇದಾಃ ವಿಷ್ಣುಪರಾಃ ವಿಷ್ಣುಪರಓಂಕಾರವ್ಯಾಖ್ಯಾನತ್ವಾತ್ ಯಃ ಯತ್ಪರಶಬ್ದವ್ಯಾಖ್ಯಾನಂ ಸಃ ತತ್ಪರಃ ಯಥಾ ಸಂಮತಃ, ಇದು ಮೊದಲಾದ ಅನುಮಾನಗಳಿಂದ ಸಮಸ್ತವೇದಗಳೂ ವಿಷ್ಣುವನ್ನೇ ಪ್ರತಿಪಾದಿಸುತ್ತವೆಂದು ಸಿದ್ಧಿಸುವ ಪ್ರಯುಕ್ತ (೧) ಪ್ರಮಾಣವಿಲ್ಲವೆಂದದ್ದು ಅಯುಕ್ತವು. (1) ಓಂಕಾರಾರ್ಥವು ವ್ಯಾಹೃತಿಯು, ವ್ಯಾಹೃತ್ಯರ್ಥವು ಗಾಯತ್ರಿಯು. ಗಾಯತ್ರಿಯ ಅರ್ಥವು ಪುರುಷಸೂಕ್ತವು. ಪುರುಷ ಸೂಕ್ತದ ಅರ್ಥವು ಸಮಸ್ತ ವೇದಗಳು. ಈ ರೀತಿಯಾಗಿ, ಆಗಲೀ ಅಥವಾ ಸಾಕ್ಷಾತ್ತಾಗಿಯೇ ವೇದಗಳಿಗೂ ಓಂಕಾರಕ್ಕೂ ವ್ಯಾಖ್ಯಾನ ವ್ಯಾಖ್ಯೇಯಭಾವವನ್ನು ತಿಳಿದುಕೊಳ್ಳಬೇಕು. (2) ಮತ್ತು ಅದುಃಖಮಿತರತ್ಸರ್ವಂ ಜೀವಾ ಏವ ತು ದುಃಖಿನಃ । ತೇಷಾಂ ದುಃಖಪ್ರಹಾಣಾಯ ಶ್ರುತಿರೇಷಾ ಪ್ರವರ್ತತೇ ಎಂಬ ಪರಮ ಶ್ರುತಿಯಿಂದ ಜೀವರಿಗೆ ಆತ್ಯಂತಿಕದುಃಖ ನಿವೃತ್ತಿರೂಪವಾದ ಬಂಧನಿವೃತ್ತಿರೂಪ ಮೋಕ್ಷಕ್ಕಾಗಿ ವೇದಗಳು ಪ್ರವೃತ್ತಗಳಾಗಿವೆ. (3) ಯಸ್ಯ ಪ್ರಸಾದಾತ್ಪರಮಾರ್ತಿರೂಪಾದಸ್ಮಾತ್ಸಂಸಾರಾನ್ಮುಚ್ಯತೇ ನಾಪರೇಣ, ಎಂಬ ನಾರಾಯಣಶ್ರುತಿಯಿಂದ ಶ್ರೀಭಗವಂತನ ಪ್ರಸಾದದಿಂದಲೇ ಸತ್ಯವಾದ ಬಂಧಕ್ಕೂ ನಿವೃತ್ತಿಯು ಸಾಧ್ಯವಾಗುವುದು, (4) ಅಂತಹ ಪ್ರಸಾದವು ಪ್ರಿಯೋ ಹಿ ಜ್ಞಾನಿನೋಽತ್ಯರ್ಥಂ ಇತ್ಯಾದಿಗಳಿಂದ ಜ್ಞಾನದಿಂದಲೇ ಸಾಧ್ಯವು. ಅಂತಹ ಜ್ಞಾನವು ವೇದಾದಿಶಾಸ್ತ್ರಗಳಿಂದಲೇ ಹುಟ್ಟಬೇಕು. ಆದಕಾರಣ ವೇದಗಳು ವಿಷ್ಣುವಿನ ಜ್ಞಾನವನ್ನು ಹುಟ್ಟಿಸುತ್ತಸೆಂದು ಸಿದ್ಧವಾಯ್ತು. ತಥಾ ಚ (5) ಸರ್ವೇ ವೇದಾಃ ವಿಷ್ಣುಜ್ಞಾನಜನಕಾಃ ತತ್ಸಾಧ್ಯಮೋಕ್ಷಾರ್ಥಂ ಪ್ರವೃತ್ತತ್ವಾತ್ ಯಃ ಯತ್ಸಾಧ್ಯಯದರ್ಥಂ ಪ್ರವೃತ್ತಃ ಸಃ ತಜ್ಜನಕಃ, ಇದು ಮೊದಲಾದ ಅನುಮಾನಗಳಿಂದಲಾಗಲೀ ಸಮಸ್ತ ವೇದಗಳೂ ವಿಷ್ಣುವಿನ ಜ್ಞಾನವನ್ನು ಹುಟ್ಟಿಸುತ್ತವೆಂದು ಸಿದ್ಧವಾಗುತ್ತದೆ.

(4) ಮತ್ತು ಶ್ರುತಿಗಳಿಗೆ ಆಪಾತತಃ ಪ್ರತೀತವಾದುದೇ ಅರ್ಥವಲ್ಲ. ಏಕೆಂದರೆ ಆಪಾತತಃ ತೋರಿದ್ದೇ ಅರ್ಥವೆಂದು ಇಟ್ಟುಕೊಂಡರೆ ಕರ್ಮಮೀಮಾಂಸಾ ಶಾಸ್ತ್ರದಲ್ಲಿ ಅಜ್ಯೈಃ ಸ್ತುವತೇ ಎಂಬ ವಾಕ್ಯದಲ್ಲಿರತಕ್ಕ ಆಜ್ಯಪದಕ್ಕೆ 'ಯದಾಜಿಮೀಯುಸ್ತದಾಜ್ಯಾನಾಮಾಜ್ಯತ್ವಂ ಎಂಬ ವಾಚನಿಕನಿರುಕ್ತ್ಯಾದಿಗಳ ಬಲದಿಂದ ಮಂತ್ರ ಎಂದು ಅರ್ಥ ಹೇಳಿದ್ದು (ಮಂತ್ರಗಳಿಂದ ಸ್ತುತಿಸುತ್ತಾರೆಂದದ್ದು) ಕೂಡದೆ ಹೋಗಬೇಕಾಗುವುದು. ಹಾಗೆಯೇ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ಆಕಾಶಾಧಿಕರಣಾದಿಗಳಲ್ಲಿ ಆಕಾಶ ಇತಿ ಹೋವಾಚ ಇತ್ಯಾದಿ ವಾಕ್ಯಗಳಲ್ಲಿರತಕ್ಕ ಆಕಾಶಾದಿ ಶಬ್ದಗಳಿಗೆ ಸ ಏಷ ಪರೋವರೀಯಾನ್ ಇತ್ಯಾದಿ ವಾಕ್ಯಶೇಷದಲ್ಲಿರತಕ್ಕ ಲಿಂಗಾದಿಬಲದಿಂದ ವಿಷ್ಣು ಎಂದರ್ಥ ಹೇಳಿದ್ದು ಕೂಡದೆ ಹೋಗುವುದು. ಆದಕಾರಣ ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್ ಇತ್ಯಾದಿಗಳಲ್ಲಿ ಹೇಳಿದ ಪ್ರಕಾರ, ಉಪಕ್ರಮ ಉಪಸಂಹಾರ ಅಭ್ಯಾಸ ಅಪೂರ್ವತಾ ಫಲ ಅರ್ಥವಾದ ಉಪಪತ್ತಿ, ಶ್ರುತಿ, ಲಿಂಗ, ವಾಕ್ಯ ಪ್ರಕರಣ ಸ್ಥಾನ ಸಮಾಖ್ಯೆ ಇವುಗಳಿಗೆ ಅನುಗುಣ್ಯವನ್ನು ಅನುಸಂಧಾನ ಮಾಡಿಕೊಂಡು ಚೆನ್ನಾಗಿ ಮೀಮಾಂಸಾ (ವಿಚಾರ)ದಿಂದ ಲಭ್ಯವಾದ ಅರ್ಥವನ್ನೇ ಹೇಳಬೇಕು. ತಥಾ ಚ ಅಗ್ನ್ಯಾದಿ ಶಬ್ದಗಳಿಗೆ ನಿಗಮ ನಿಘಂಟ್ವಾದಿ ರೂಪವಾದ ಅನುಶಾಸನ ಬಲದಿಂದಲೂ ಆಗ್ನೇಯಾದಿ ಕರ್ಮಾದಿ ಸಿದ್ಧರೂಪವಾದ ಪ್ರಯೋಜನ ಬಲದಿಂದಲೂ ಪ್ರಸಿದ್ಧಗಳಾದ ಅಗ್ನ್ಯಾದಿಗಳಲ್ಲಿ ಹೇಗೆ ಶಕ್ತಿಯಿದೆಯೋ ಹಾಗೆಯೇ ವಿಷ್ಣುವಿನಲ್ಲಿಯೂ ಶಕ್ತಿಯು ಇದೆ. ಹೇಗೆಂದರೆ ಚಮಸವದವಿಶೇಷಾತ್ (೧.೪.೯) ಇತ್ಯಾದಿಗಳಲ್ಲಿ ಭಾಷ್ಯದಲ್ಲಿ ಹೇಳಿದ ಪ್ರಕಾರ (1) ನಾಮಾನಿ ಸರ್ವಾಣಿ ಯಮಾವಿಶಂತಿ ತಂ ವೈ ವಿಷ್ಣುಂ ಪರಮಮುದಾಹರಂತಿಎಂದು ಭಾಲ್ಲವೇಯ ಶ್ರುತಿ)(2) ಏತಂ ಏತಮೇವ ಪುರುಷಂ ಸರ್ವಾಣಿ ನಾಮಾನ್ಯಭಿವದಂತಿ (ಭಾಷ್ಯ. ಉದಾಹೃತ) (3) ಸರ್ವನಾಮಾ ಸರ್ವಕರ್ಮಾ ಸರ್ವಲಿಂಗಃ(ಮ.ಉ.) (4) ಯೋ ದೇವಾನಾಂ ನಾಮಧಾ ಏಕ ಏವ (ಋ. ಮ. ೧೦. ೮೨. ೩) ಇತ್ಯಾದಿ ಶ್ರುತಿಗಳಿಂದಲೂ, (5) ಸರ್ವಶಬ್ದೋಽಭಿಧೋ ಹ್ಯೇಷಃ ಸರ್ವದೇವಾಭಿಧೋ ಹ್ಯಸೌ (ವಾಮನ, ಪು.) ಇತ್ಯಾದಿ ಸ್ಮೃತಿಗಳಿಂದಲೂ ಸಾಮಾನ್ಯವಾಗಿ, (6) ಇಂದ್ರಂ ಮಿತ್ರಂ ವರುಣಮಗ್ನಿಮಾಹುರಥೋ ದಿವ್ಯಃ ಸ ಸುಪರ್ಣೋ ಗರುತ್ಮಾನ್ (ಋ. ಮ. ೧. ೧೬೪. ೪೬) (7) ಯಮಿಂದ್ರಮಾಹುರ್ವರುಣಂ ಯಮಾಹುರ್ಯಂ ಮಿತ್ರಮಾಹುರ್ಯಮು ಸತ್ಯಮಾಹುಃ (ಅ. ಉ. ಭಾ. ಉದಾ.) ಇತ್ಯಾದಿ ಶ್ರುತಿಗಳಿಂದಲೂ, (8) ಬೃಂಹಣಾದ್ಬ್ರಹ್ಮನಾಮಾಹಂ ಗಾಮೈಶ್ವರ್ಯಾದಿಂದ್ರ ಉಚ್ಯತೇ ! ಏವಂ ನಾನಾವಿಧೈಃ ಶಬ್ದೈರೇಕ ಏವ ತ್ರಿವಿಕ್ರಮಃ । ವೇದೇಷು ಸಪುರಾಣೇಷು ಗೀಯತೇ ಪುರುಷೋತ್ತಮಃ (ಬ್ರಹ್ಮಾಂಡ) ॥ ಇದು ಮೊದಲಾದ ಸ್ಮೃತಿಗಳಿಂದಲೂ ಹೀಗೆ ವಿಶೇಷವಾಗಿ ಅನುಶಾಸನ ರೂಪಗಳಾದ ಈ ಶ್ರುತ್ಯಾದಿಗಳಿಂದ ಶ್ರೀ ವಿಷ್ಣುವಿನಲ್ಲಿಯೂ ಶಕ್ತಿಯು ಸಿದ್ಧವಾಗುವ ಪ್ರಯುಕ್ತ ಅಗ್ನ್ಯಾದಿ ಶಬ್ದಗಳಿಗೆ ವಿಷ್ಣುವೆಂಬ ಅರ್ಥವೂ ಮಂತ್ರಗಳಲ್ಲಿ ನ್ಯಾಯವೇ ಆಗಿದೆ. ಆದಕಾರಣ ಒಂದು ಶಬ್ದಕ್ಕೆ ಅನೇಕಾರ್ಥ ಹೇಳುವುದು ಅನ್ಯಾಯವಲ್ಲ.

(5) ಮತ್ತು ಇಂದ್ರ ಅಗ್ನಿ ಮೊದಲಾದ ಶಬ್ದಗಳ ಯೋಗವು ವೇದವ್ಯಾಸ ಕೃತವಾದ ನಿರುಕ್ತಿ ಮೊದಲಾದ ಸ್ಮೃತಿಗಳಿಂದ ಸಿದ್ಧವಾಗುವ ಪ್ರಯುಕ್ತ ಇಂದ್ರ ಅಗ್ನಿ ಮೊದಲಾದ ಶಬ್ದಗಳ ಪ್ರವೃತ್ತಿ ನಿಮಿತ್ತವಾದ ಪರಮೈಶ್ವರ್ಯ ಮೊದಲಾದುದು ಅನನ್ಯಾಧೀನತ್ವ, ನಿರವಧಿಕತ್ವಗಳಿಂದ (೧) ನ ತೇ ವಿಷ್ಣೋ ಜಾಯಮಾನೋ ನ ಜಾತಃ (ಋ. ಮ. ೭.೯೯.೨.) ಇದು ಮೊದಲಾದ ಶ್ರುತಿ ಸ್ಮೃತಿಗಳ ಬಲದಿಂದ ಶ್ರೀವಿಷ್ಣುವಿನಲ್ಲಿಯೇ ಮುಖ್ಯವಾಗಿ ಕೂಡುವುದರಿಂದ ಆ ಯೋಗವು ಮಹಾಯೋಗರೂಪವಾಗಿರುವುದರಿಂದಲೂ ಶ್ರೀಹರಿಯಲ್ಲಿ ಯೋಗವೂ ಬಲಿಷ್ಠವೇ ಆಗಿದೆ. (1)ಮತ್ತು ಇಂದ್ರಂ ಮಿತ್ರಂ ಇತ್ಯಾದಿ ಶ್ರುತಿಗಳಲ್ಲಿ ಆಹುಃ ಎಂದು ಹೇಳಿದ ಕಾರಣ ಪ್ರಯೋಗಬಾಹುಲ್ಯರೂಪ ಲಿಂಗಬಲದಿಂದ ಶ್ರೀಹರಿಯಲ್ಲಿ ವಿದ್ವದ್ರೂಢಿಯೂ ಇದೆ ಎಂದುಕ್ತವಾಯ್ತು. ಅಜ್ಞರೂಢಿಗಿಂತ ವಿದ್ವದ್ರೂಢಿಯು ಬಲಿಷ್ಠವು. ಮತ್ತು ಐತರೇಯದಲ್ಲಿ ಶಂ

**ಯಚ್ಛತಂ ವರ್ಷಾಣ್ಯಧ್ಯಾರ್ಚತ್** ಇತ್ಯಾದಿಗಳಲ್ಲಿ **ಸರ್ವೇ ವೇದಾಃ ಸರ್ವೇ ಘೋಷಾಃ ಏಕೈವ ವ್ಯಾಹೃತಿಃ ಪ್ರಾಣ ಏವ ಪ್ರಾಣ ಋಚಃ ಇತ್ಯೇವ ವಿದ್ಯಾತ್** ಎಂಬ ಪರ್ಯಂತ ವಾಕ್ಯದಲ್ಲಿ ಬ್ರಹ್ಮನೆಂದು ನಿರ್ಣೀತನಾದ **ಪ್ರಾಣೋ ಹ್ಯೇಷ ಯ ಏಷ ತಪತಿ** ಎಂಬ ಪೂರ್ವವಾಕ್ಯದಲ್ಲಿದ್ದ ಪ್ರಾಣನನ್ನು ಪರಾಮರ್ಶಮಾಡಿಕೊಂಡು ಪೂರ್ಣಅವಯವಾರ್ಥವನ್ನು ಹೇಳಿ ಮಹಾಯೋಗದಿಂದಲೂ ಆಚಕ್ಷತೇ ಎನ್ನುವುದರಿಂದ ಲಭ್ಯವಾದ ವಿದ್ವದ್ರೂಢಿಯಿಂದಲೂ ಇಂದ್ರಾದಿಗಳಿಗೆ ಅಜ್ಞರೂಢಿಯಿಂದ ಬಂದ ಮುಖ್ಯತ್ವವನ್ನು ನಿರಾಕರಿಸಿ **ತಸ್ಮಾಚ್ಛತರ್ಚಿನಸ್ತಸ್ಮಾಚ್ಛತರ್ಚಿನ ಇತ್ಯಾಚಕ್ಷತೇ** ಇದು ಮೊದಲಾದ ಅಭ್ಯಾಸ (ಅಸಕೃದಾವೃತ್ತಿ) ದಿಂದ ತಾತ್ಪರ್ಯಪೂರ್ವಕವಾಗಿ ಶ್ರೀ ವಿಷ್ಣುವಿನಲ್ಲಿಯೇ ಸರ್ವಶಬ್ದಗಳಿಗೂ ಮುಖ್ಯಾರ್ಥತ್ವವನ್ನು ಹೇಳುತ್ತಾ ಸಮಸ್ತವೇದಗಳಿಗೂ ವಿಷ್ಣುಪರತ್ವವನ್ನೇ ಹೇಳಿದೆ, ಎಂದು **ಆಚಕ್ಷತ ಇತಿ ಹ್ಯತ್ರ ಸಂತಮಿತ್ಯವಧಾರಣಾತ್। ಯೋಗಸ್ಯ ರೂಢೇಃಪ್ರಾಬಲ್ಯಂ ವಿದ್ವದ್ರೂಢಿಂ ಚ ತತ್ರಗಾಂ। ಪ್ರಾಬಹುಶೋ ದರ್ಶಯತ್ಯಂಜಃ ತಾತ್ಪರ್ಯಾತ್ಸನಿರುಕ್ತಿಕಂ॥** ಎಂದು ಅನುವ್ಯಾಖ್ಯಾನದಲ್ಲಿ ಹೇಳಿದೆ. ಮತ್ತು (1) **ಅವಸ್ವರಾತಿ ಗರ್ಗರೋ ಗೋಧಾ** ಇತ್ಯಾದಿಶ್ರುತಿಗಳಲ್ಲಿ ಗರ್ಗರ ಗೋಧಾದಿ ಶಬ್ದಗಳು ಇಂದ್ರನೆನಿಸಿದ ಪರಮೈಶ್ವರ್ಯಸಂಪನ್ನನಾದ ಶ್ರೀ ವಿಷ್ಣುವಿನಲ್ಲಿ ಮಂತ್ರಶಾಸ್ತ್ರಸಿದ್ಧವಾದ ನಾದರೂಪವರ್ಣವನ್ನು ಅಭಿವ್ಯಕ್ತೀಕರಿಸಿ ವಾಚಕಗಳಾಗುತ್ತವೆಂದು ಹೇಳಿ ನಿಖಿಲವೇದಗಳೂ ಭಗವದ್ವಾಚಕಗಳೇ ಎಂದು ಸಮರ್ಥಿತವಾಗಿದೆ. ಮತ್ತೂ (2) ಅ ಇತಿ ಬ್ರಹ್ಮ ಎಂದು ಅಕಾರವೇ ಪರಬ್ರಹ್ಮವಾಚಕವು ಎಂದು ಹೇಳಿದುದರಿಂದ (3) **ಅಕಾರೋ ವೈ ಸರ್ವಾ ವಾಕ್** ಎಂಬ ಐತರೇಯಶ್ರುತಿಯಲ್ಲಿಯೂ (4) ಅಕಾರಸ್ಸರ್ವವಾಗಾತ್ಮಾ ಪರಬ್ರಹ್ಮಾಭಿಧಾಯಕಃ (ಗರು. ಪು) ಎಂಬ ಸ್ಮೃತಿಯಲ್ಲಿಯೂ ಸರ್ವಶಬ್ದಗಳೂ ಪರಬ್ರಹ್ಮವಾಚಕಗಳೆಂದು ಸಮರ್ಥಿಸಿಯದೆ. (5) ಮತ್ತು **ಸೃಜತೋಽಹಿ ತೇ ಶ್ರುತಯೋಽನುವರ್ತಂತೇ ನೈವಾಸೃಜತಃ ಕಂ ವಾ ವಿದಧತೇ ಕಂ ವಾ ನಿಷೇಧಂತಿ ಸ್ತುತಿಮಾತ್ರಾ ಏವ ತೇ ಸ್ಯುಃ** ಎಂದು ಶ್ರುತಿಗೀತಾತಾತ್ಪರ್ಯದಲ್ಲಿ ಹೇಳಿದ್ದ ಶಾಂಡಿಲ್ಯ ಶ್ರುತಿಯಲ್ಲಿ ವಿಧ್ಯಾದಿ ಭಾಗವೂ ಭಗವಂತನನ್ನೇ ಸ್ತುತಿಸುತ್ತದೆಂದುಹೇಳಿದೆ. ಮತ್ತು (6) **ಯದ್ವೈ ಕಿಂ ಚೈತದಧ್ಯಗೀಷ್ಮಾ ನಾಮೈವೈತನ್ನಾಮ ವಾ ಋಗ್ವೇದೋ ಯಜುರ್ವೇದಃ ಸಾಮವೇದಃ ಆಥರ್ವಣಶ್ಚತುರ್ಥಃ** ಎಂದು ಛಾಂದೋಗ್ಯದಲ್ಲಿಯೂ, **ಯದ್ವಾಚ ಓಮಿತಿ ಯಚ್ಚನೇತಿಯಾಚ್ಚಾಸ್ಯಾಃಕ್ರೂರಂ ಯದು ಚೋಲ್ಬಣಿಷ್ಣು ತದ್ವಿಯೂಯು ಕವಯೋಽನ್ವವಿಂದನ್ನಾಮಾಯತ್ತಾ ಸಮತೃಪ್ಯನ್ ಛೃತೇಽಧಿ** ಎಂಬ ಐತರೇಯದಲ್ಲಿಯೂ ಸಮಸ್ತ ವೈದಿಕ ಶಬ್ದಗಳೂ ಭಗವಂತನ ನಾಮಗಳೇ ಎಂದು ಹೇಳಿದೆ. ಮತ್ತು (8) **ನಾರಾಯಣಪರಾ ವೇದಾಃ ದೇವಾಃ ನಾರಾಯಣಾಂಗಜಾಃ ।** ಎಂದು ಭಾ. ೨ನೇ ಸ್ಕಂಧ, ೫ನೇ ಅಧ್ಯಾಯದಲ್ಲಿಯೂ,(9)**ವಾಸುದೇವಪರಾಃವೇದಾಃ ವಾಸುದೇವಪರಾ ಮಖಾಃ** ಎಂದು ೧ನೇ ಸ್ಕಂಧ,೨ನೇ ಅಧ್ಯಾಯದಲ್ಲಿಯೂ(10)**ವೇದೇ ರಾಮಾಯಣೇ ಚೈವ ಪುರಾಣೇ ಭಾರತೇ ತಥಾ। ಆದಾವಂತೇಚ ಮಧ್ಯೇಚ ವಿಷ್ಣುಃಸರ್ವತ್ರ ಗೀಯತೇ**ಎಂದುಹರಿವಂಶದಲ್ಲಿಯೂ ಹೀಗೆ ಸರ್ವತ್ರ ವೇದಾದಿಗಳಿಗೆ ವಿಷ್ಣು ಪರತ್ವವನ್ನೇ ಹೇಳಿದೆ.ಮತ್ತು(11)**ವೇದೈಶ್ಚ ಸರ್ವೈರಹಮೇವ ವೇದ್ಯಃ** ಎಂದು ಶ್ರೀಕೃಷ್ಣ ಪರಮಾತ್ಮನು ತಾನೇ ಪರಮ ಮುಖ್ಯ ವೃತ್ತಿಯಿಂದ ಸಮಸ್ತ ವೇದಗಳಿಂದ ಪ್ರತಿಪಾದ್ಯನೆಂದು ಭಕ್ತಾಗ್ರೇಸರನಾದ ಅರ್ಜುನನಿಗೆ ಉಪದೇಶಿಸಿರುವನು. ಮತ್ತು (12) **ಸರ್ವೇ ವೇದಾ ಯತ್ಪದಮಾಮನಂತಿ** ಎಂದು(ಕಾಠ.ಪು 48)ಕಾಠಕದಲ್ಲಿಮುಖ್ಯವಾಗಿ ಅಶೇಷವೇದಗಳಿಂದ ವೇದ್ಯನೆಂದುಹೇಳಿ,(13) **ತದ್ವಿಷ್ಣೋಃ ಪರಮಂ ಪದಂ** ಎಂದುಪಸಂಹಾರಮಾಡಿಯದೆ. ಸಮನ್ವಯಸೂತ್ರದಲ್ಲಿ ಸಮಸ್ತ ವೇದಗಳಿಗೆ ಶ್ರೀಹರಿಯಲ್ಲಿಯೇ ಸಮನ್ವಯವನ್ನು ಪ್ರತಿಜ್ಞಾ ಮಾಡಿ ಆನಂದಮಯೋಽಭ್ಯಾಸಾತ್ 1 ಬ್ರ. ಸೂ. ೧.೧.೧೨. ಇತ್ಯಾದಿಗಳಿಂದ ಅದನ್ನೇ ವಿವರಿಸಿರುವರು. ಜ್ಯೋತಿರಧಿಕರಣದಲ್ಲಿ ವಿ ಮೋ ಕರ್ಣಾಪತಯತಃ ಎಂಬ ಅಗ್ನಿಸೂಕ್ತಕ್ಕೆ ಕರ್ಣಾದಿ ವಿದೂರತ್ವಾದಿರೂಪವಾದ ವಿಷ್ಣುಲಿಂಗದಿಂದ ವಿಷ್ಣುಪರತ್ವವನ್ನೇ ಸಮರ್ಥಿಸಿರು-

ವರು. ಇಷ್ಟು ಮಾತ್ರವಲ್ಲದೆ ಸಮಸ್ತವೇದಗಳೂ ವಿಷ್ಣು ಪರಗಳೆಂದು ಇಟ್ಟುಕೊಂಡರೆ ವೇದಗಳಿಗೆ ಅಪೂರ್ವತಾರೂಪವಾದ ತಾತ್ಪರ್ಯಲಿಂಗವು ಪ್ರತೀತವಾಗುವುದರಿಂದ ಜ್ಞಾನಿಗಳಿಗೆ ಮೋಕ್ಷವು ಲಭಿಸುವುದು. (14) ನ ತಾದೃಶೀ ಪ್ರೀತಿರೀಡ್ಯಸ್ಯ ವಿಷ್ಣೋರ್ಗುಣೋತ್ಕರ್ಷಜ್ಞಾತರಿ ಯಾದೃಶೀ ಸ್ಯಾತ್ । ತತ್ಪ್ರೀಣನಾನ್ಮೋಕ್ಷಮಾಪ್ನೋತಿ ಸರ್ವಸ್ತತೋ ವೇದಾಸ್ತತ್ಪರಾಃ ಸರ್ವ ಏವ ॥ ಎಂಬ ಸೌಪರ್ಣ ಶ್ರುತಿಯಿಂದಲೂ, (15) ಪ್ರಿಯೋ ಹಿ ಜ್ಞಾನಿನೋಽತ್ಯರ್ಥ. ಎಂಬ ಸ್ಮೃತಿಯಿಂದಲೂ ವಿಷ್ಣುವನ್ನು ಪ್ರತಿಪಾದಿಸಿದರೆ ವಿಷ್ಣು ಜ್ಞಾನ ಸಾಧ್ಯವಾದ ಮೋಕ್ಷಾಖ್ಯ ಮಹಾಫಲವು ಲಭಿಸುವುದು. (16) ಯಸ್ತನ್ನ ವೇದ ಕಿಮೃಚಾ ಕರಿಷ್ಯತಿ ಇತ್ಯಾದಿಗಳಿಂದ ಶ್ರೀಹರಿಯನ್ನು ತಿಳಿಯದೆ ಇದ್ದರೆ ನಿಂದಾರೂಪ ಅರ್ಥವಾದವೂ (17) ಯ ಇತ್ತದ್ವಿದುಸ್ತ ಇಮೇ ಸಮಾಸತೇ ಎಂದು ತಿಳಿದರೆ ಸ್ತುತಿರೂಪವಾದ ಅರ್ಥವಾದವೂ ಉಕ್ತವಾಗಿದೆ. ಹಾಗೆಯೇ ಅನುಕ್ರಮಣಿಕೆಯಲ್ಲಿಯೂ (18) ಏಕೈವ ವಾ ಮಹಾನಾತ್ಮಾ ದೇವತಾ ಎಂದು ಸಮಸ್ತ ಸೂಕ್ತಗಳಿಗೂ ಪರಮಾತ್ಮನೇ ದೇವತೆಯೆಂದೂ ಹೇಳಿದೆ.

ಹಾಗಾದರೆ ಸಮಸ್ತವೇದಗಳೂ ವಿಷ್ಣು ರೂಪವಾದ ಅರ್ಥವನ್ನು ಮಾತ್ರ ಪ್ರತಿಪಾದಿಸುವೆಂದಾಗಲಿ, ಅಗ್ನ್ಯಾದಿರೂಪವಾದ ಅರ್ಥವನ್ನು ಪ್ರತಿಪಾದಿಸದೇನೇ ಇರಲಿ. ಗೌರವವು ಬರುವುದು, ಎಂದರೆ ಹಾಗೆ ಹೇಳಕೂಡದು. ಕಲ್ಪನೋಪದೇಶಾತ್ (೧. ೪. ೧೧) ಎಂಬ ಸೂತ್ರದ ತಾತ್ಪರ್ಯವನ್ನು ನಿರೂಪಿಸತಕ್ಕ ಅನುವ್ಯಾಖ್ಯಾನದಲ್ಲಿ (1) ತೇಷು ತೇಷು ಪದಾರ್ಥೇಷು ರೂಢಿರಂಗೀಕೃತಾ ಯತಃ । ಪ್ರಯೋಜನ ಬಹುತ್ವೇನ ತಸ್ಯಾಶ್ಚಾವಿರೋಧತಃ । ಉಪದೇಶಾದಿ ಸಾಮರ್ಥ್ಯಾದ್ವಿಷ್ಣೌ ಶಕ್ತಿಶ್ಚ ಗೃಹ್ಯತೇ । ಎಂಬಲ್ಲಿ ಅಗ್ನ್ಯಾದಿ ದೇವತಾ ಸ್ವರೂಪ ಸಿದ್ಧಿ ಮೊದಲಾದ ಬಹು ಪ್ರಯೋಜನಗಳು ಲಭಿಸುವುದಕ್ಕಾಗಿ ಅಗ್ನ್ಯಾದಿದೇವತಾ ರೂಪವಾದ ಅರ್ಥವೂ ಆವಶ್ಯಕವೆಂದು ಹೇಳಿದೆ. ಮತ್ತು ನಿಗಮನಿಘಂಟು ವ್ಯಾಕರಣಾದಿಗಳಿಂದ ಸಿದ್ಧವಾದ ವ್ಯುತ್ಪತ್ತಿಯಿಂದ ಲಭ್ಯವಾದ ಅಗ್ನ್ಯಾದಿ ದೇವತಾರೂಪವಾದ ಅರ್ಥವನ್ನು ಬಿಡುವುದು ಸರ್ವಥಾ ಯುಕ್ತವಲ್ಲ. ಮತ್ತೂ (2) ತ್ರಯೋಽರ್ಥಾಃ ಸರ್ವವೇದೇಷು ದಶಾರ್ಥಾಃ ಸರ್ವಭಾರತೇ । ವಿಷ್ಣೋಃ ಸಹಸ್ರನಾಮಾಪಿ ನಿರಂತರಶತಾರ್ಥಕಂ । ಎಂಬ ಸ್ಕಾಂದ ಸ್ಮೃತಿಯಿಂದ ವೇದಗಳಿಗೆ ೩ ಅರ್ಥಗಳು ಇವೆ ಎಂದು ಹೇಳಿದೆ. ಅನ್ಯಾರ್ಥಂತು ಜೈಮಿನಿಃ (೧.೪.೧೮) ಇತ್ಯಾದಿಗಳಲ್ಲಿ ಸೂತ್ರಕಾರರು ಪರಬ್ರಹ್ಮನ ಜ್ಞಾನಕ್ಕಾಗಿ ಕರ್ಮ ದೇವತಾ ರೂಪವಾದ ಅರ್ಥಾಂತರವೂ ಆವಶ್ಯಕವೆಂದು ಹೇಳಿರುವರು.

ಹಾಗಾದರೆ-(1 ನಾಮಾನಿ ವಿಶ್ವಾಭಿ ನ ಸಂತಿ ಲೋಕೇ ಎಂಬ ಭಾಲ್ಲವೇಯ ಶ್ರುತಿಯಲ್ಲಿ ಇಂದ್ರಾದಿಗಳು ವಾಚ್ಯರು ಆಗುವುದೇ ಇಲ್ಲ, ವಿಷ್ಣುವೇ ವಾಚ್ಯನು, ಎಂದು ಹೇಳಿದೆ. ಹಾಗೆಯೇ (2) ವೇದೈಶ್ಚ ಸರ್ವೈರಹಮೇವ ವೇದ್ಯಃ (೧೫.೧೫-೧೫)ಎಂಬ ಸ್ಮೃತಿಯಲ್ಲಿಯೂ ನಾನೇ ವೇದ್ಯನು, ಬೇರೆ ಯಾವರು ವೇದ್ಯರಲ್ಲ ಎಂದು ಹೇಳಿದೆ. ಹಾಗೆಯೇ ತತ್ತುಸಮನ್ವಯಾತ್ (ಬ್ರ. ಸೂ. ೧. ೧. ೪.) ಎಂಬಲ್ಲಿ ಅವಧಾರಣಾರ್ಥಕ ತು ಶಬ್ದದಿಂದ ವಿಷ್ಣ್ವಾಖ್ಯಬ್ರಹ್ಮನೇ ಸರ್ವಶಾಸ್ತ್ರಪ್ರತಿಪಾದ್ಯನೆಂದು ಪ್ರತಿಜ್ಞಾ ಮಾಡಿ ಇಡೀ ೧ನೇ ಅಧ್ಯಾಯದಿಂದ ಇಂದ್ರಾದಿ ಶಬ್ದವಾಚ್ಯನು ಶ್ರೀ ವಿಷ್ಣುವೇ, ಆಕಾಶ ಪ್ರಾಣ ಜ್ಯೋತಿರಾದಿ ಶಬ್ದವಾಚ್ಯನೂ ಶ್ರೀ ವಿಷ್ಣುವೇ ಎಂದು ಸಪ್ರಮಾಣವಾಗಿ ಸಮಸ್ತ ಶಬ್ದಗಳಿಗೂ ಕೇವಲ ಶ್ರೀ ವಿಷ್ಣುವೇ ಅರ್ಥನೆಂದು ಸಮರ್ಥಿಸಿರುವರು. ಮತ್ತು (3) ತಮೇವೈಕಂ ಜಾನಥ ಆತ್ಮಾನಮನ್ಯಾ ವಾಚೋ ವಿಮುಂಚಥ ಆ. ಉಪನಿಷತ್ತಿನಲ್ಲಿ ಶ್ರೀವಿಷ್ಣುವಿಗೇನೇ ಜ್ಞೇಯತ್ವವು, ಇತರರಿಗೆ ಜ್ಞೇಯತ್ವವಿಲ್ಲವೆಂದೂ ಹೇಳಿದೆ. ಆದಕಾರಣ ಇತ್ಯಾದಿಪ್ರಮಾಣಗಳಿಂದ ವಿರೋಧವು ಬರುವುದು, ಎಂದರೆ, ಹಾಗೆ ಹೇಳ ಕೂಡದು. ಮುಖ್ಯವೃತ್ತಿಯಿಂದ ಇಂದ್ರಾದಿಗಳು ವಾಚ್ಯರಾದಾಗ್ಯೂ ಪರಮ ಮುಖ್ಯವೃತ್ತಿಯಿಂದ ಇಂದ್ರಾದಿಗಳು ವಾಚ್ಯರಾಗುವುದಿಲ್ಲ. ಶ್ರೀ ಭಗವಂತನೇ ಪರಮ ಮುಖ್ಯ ವೃತ್ತಿಯಿಂದ ವಾಚ್ಯನು. ಪರಮ ಮುಖ್ಯವೃತ್ತಿಯಿಂದಲೇ

ಇಂದ್ರಾದಿಗಳಿಗೆ ವಾಚ್ಯತ್ವವನ್ನು ಶ್ರುತಿ ಸೂತ್ರಾದಿಗಳಲ್ಲಿ ನಿರಾಕರಿಸಿದ್ದು. ಹಾಗೆಯೇ ಅನ್ಯಾ ವಾಚೋ ವಿಮುಂಚಥ ಇತ್ಯಾದಿ ಶ್ರುತಿಸೂತ್ರಗಳಲ್ಲಿಯೂ ಸರ್ವೋತ್ತಮರೆಂದು ಇತರರನ್ನು ತಿಳಿಯ ಬಾರದು ಎಂದದ್ದು. ಆದುದರಿಂದಲೇ ಅಂಗಾವಬದ್ಧಾಸ್ತು ನ ಶಾಖಾಸು ಹಿ ಪ್ರತಿವೇದಂ (3. 3. 57) ಎಂಬ ಸೂತ್ರದಲ್ಲಿ ಬ್ರಹ್ಮ ರುದ್ರ ಇಂದ್ರ ಮಿತ್ರ ವರುಣ ಮೊದಲಾದ ಅಂಗದೇವತಾ ವಿಷಯಕಗಳಾದ ಉಪಾಸನಾ ನಮನ ಪೂಜನ ಮನನಾದಿಗಳನ್ನು ಮಾಡಬೇಕೆಂದು ಹೇಳಿ ಮಂತ್ರಾದಿವದ್ವಾಽವಿರೋಧಃ (3.3.58.) ಎಂಬ ಗುಣಸೂತ್ರದಲ್ಲಿ ಹೇಗೆ ಅಧಮ ದೇವತಾ ಪರಗಳಾದ ಮಂತ್ರಗಳು ಉತ್ತಮ ದೇವತೆಗಳನ್ನು ಪ್ರತಿಪಾದಿಸುತ್ತವೆಂದು ತಿಳಿಯಬೇಕೋ, ಹಾಗೆಯೇ ಅಧಮ ದೇವತೆಗಳ ಗುಣಗಳು ಉತ್ತಮ ದೇವತೆಗಳಲ್ಲಿ ಇವೆ ಎಂದು ತಿಳಿಯ ಬೇಕು, ಧ್ಯಾನಿಸ ಬೇಕು, ಆದರೆ ಉತ್ತಮ ದೇವತೆಗಳ ಗುಣಗಳನ್ನು ಅಧಮದೇವತೆಗಳಲ್ಲಿ ಧ್ಯಾನಿಸಬಾರದು. ತಿಳಿಯಬಾರದು. ಉತ್ತಮ ದೇವತಾ ಪರಗಳಾಗಿ ಪ್ರತೀತಗಳಾದ ಮಂತ್ರಗಳನ್ನು ಅಧಮ ದೇವತಾ ಪರಗಳನ್ನಾಗಿ ಹೇಗೆ ತಿಳಿಯ ಬಾರದೋ, ಹಾಗೆಯೇ ಎಂದು ಹೇಳಿದೆ.

.ಹಾಗಾದರೆ ಹೀಗೆ ಅನೇಕಾರ್ಥಗಳನ್ನು ಇಟ್ಟುಕೊಂಡರೆ ವಾಕ್ಯ ಭೇದವು ಬರುವುದೆಂದರೆ ಹಾಗೆ ಹೇಳಕೂಡದು. ಸಮಾಕರ್ಷಾತ್ (೧—೪—೧೭) ಎಂಬಲ್ಲಿ ಹೇಳಿದ ಪ್ರಕಾರ ಪರಮ ಮುಖ್ಯ ವೃತ್ತಿಯಿಂದ ವಿಷ್ಣು ರೂಪವಾದ ಅರ್ಥವನ್ನೂ ಮುಖ್ಯ ವೃತ್ತಿಯಿಂದ ಇಂದ್ರಾದಿ ರೂಪವಾದ ಅರ್ಥವನ್ನೂ ಅಂಗೀಕರಿಸುವೆವು. ಒಂದೇ ವೃತ್ತಿಯಿಂದ ಅನೇಕಾರ್ಥಗಳನ್ನು ಇಟ್ಟುಕೊಂಡರೆ ಮಾತ್ರ ವಾಕ್ಯ ಭೇದ ಮೊದಲಾದ ದೋಷಗಳು ಬರಬಹುದಿತ್ತು. ಹಾಗೆ ಅಂಗೀಕರಿಸಲಿಲ್ಲ. ಆದುದರಿಂದಲೇ ತಸ್ಮಾತ್ಪರಮ ಮುಖ್ಯತ್ವಂ ವಿಷ್ಣಾವನ್ಯತ್ರ ಮುಖ್ಯತಾ। ಶ್ರೀ ವಿಷ್ಣುವಿನಲ್ಲಿ ಪರಮ ಮುಖ್ಯ ವೃತ್ತಿಯು ಇಂದ್ರಾದಿಗಳಲ್ಲಿ ಮುಖ್ಯ ವೃತ್ತಿಯು ಎಂದು ಅನುವ್ಯಾಖ್ಯಾನದಲ್ಲಿ ಹೇಳಿದೆ.

ಆದುದರಿಂದಲೇ ಅಗ್ನಿ ಇಂದ್ರ ಇತ್ಯಾದಿ ಪದಗಳಿಗೆ ಪರಮ ಮುಖ್ಯ ವೃತ್ತಿಯಿಂದ ಶ್ರೀ ವಿಷ್ಣು ಪರತ್ವವಿದ್ದರೂ ಮುಖ್ಯ ವೃತ್ತಿಯಿಂದ ಅಗ್ನ್ಯಾದಿ ದೇವತಾ ಪರತ್ವವೂ ಇದ್ದುದರಿಂದ ಅಗ್ನಿ ಸೂಕ್ತ, ಇಂದ್ರ ಸೂಕ್ತ ಇತ್ಯಾದಿ ವ್ಯವಸ್ಥೆಯು ಕೂಡುತ್ತದೆ. ಆದಕಾರಣ ವ್ಯವಸ್ಥೆಯಿಲ್ಲವೆನ್ನುವ ದೋಷವಿಲ್ಲ. ೨ ಕಡೆಗಳಲ್ಲಿ ತಾತ್ಪರ್ಯವನ್ನು ಕಲ್ಪಿಸಿದರೆ ತಾತ್ಪರ್ಯ ಭೇದವು ಬರುವುದರಿಂದ ತತ್ಪ್ರಯುಕ್ತ ವಾಕ್ಯ ಭೇದ ದೋಷವು ಬರುತ್ತದೆಂದರೆ, ಹಾಗೆ ಹೇಳಕೂಡದು, ಶ್ರೀ ವಿಷ್ಣುವಿನಲ್ಲಿ ಮಾತ್ರ ಮಹಾ ತಾತ್ಪರ್ಯವಿರುವುದು. ಮಹಾ ತಾತ್ಪರ್ಯ ಒಂದೇ ಆದುದರಿಂದ ವಾಕ್ಯ ಭೇದ ದೋಷವಿಲ್ಲ. (೧) ಸರ್ವೋತ್ಕರ್ಷೇ ದೇವ ದೇವಸ್ಯ ವಿಷ್ಣೋರ್ಮಹಾತಾತ್ಪರ್ಯಂ ನೈವ ಚಾನ್ಯತ್ರ ಸತ್ಯಂ। ಅವಾಂತರಂ ತತ್ಪರತ್ವಂ ತದನ್ಯತ್ಸರ್ವಾಗಮಾನಾಂ ಪುರುಷಾರ್ಥಸ್ತತೋಽತಃ ॥ (ಎಂದು ಪೈಂಗಿ ಶ್ರುತಿ) (೨) ಸರ್ವಜ್ಞಂ ಸರ್ವ ಕರ್ತಾರಂ ನಾರಾಯಣಮನಾಮಯಂ। ಸರ್ವೋತ್ತಮಂ ಜ್ಞಾಪಯಂತೀ ಮಹಾ ತಾತ್ಪರ್ಯಮತ್ರಹಿ। ಸರ್ವೇಷಾಮಪಿ ವೇದಾನಾಮಿತಿಹಾಸಪುರಾಣಯೋಃ। ಪ್ರಮಾಣಾನಾಂಚ ಸರ್ವೇಷಾಂ ತದರ್ಥಂ ಚಾನ್ಯದುಚ್ಯತೇ ॥ ಇತ್ಯಾದಿ ನಾರದೀಯಪುರಾಣಾದಿಗಳು. ಇತ್ಯಾದಿಗಳಲ್ಲಿ ಮಹಾತಾತ್ಪರ್ಯ ಅವಾಂತರ ತಾತ್ಪರ್ಯ ಭೇದದಿಂದ ಅನೇಕಾರ್ಥಗಳನ್ನು ಹೇಳಿ ಸಮಸ್ತವೇದ, ಇತಿಹಾಸ, ಪುರಾಣ, ಸಮಸ್ತ ಪ್ರಮಾಣಗಳಿಗೂ ಸರ್ವೋತ್ತಮನಾದ ಶ್ರೀ ವಿಷ್ಣುವಿನಲ್ಲಿಯೇ ಮಹಾ ತಾತ್ಪರ್ಯವು. ಇತರರಲ್ಲಿ ಅವಾಂತರ ತಾತ್ಪರ್ಯವು, ಎಂದು ಹೇಳಿದೆ. (3) ಮತ್ತು ಅಗ್ನ್ಯಾದಿ ಸೂಕ್ತಗಳಿಂದ ಭಗವಂತನನ್ನು ಉಪಾಸನೆ ಮಾಡುವವರಿಗೆ ಅಗ್ನಿ ಮೊದಲಾದ ಅಧಿಷ್ಠಾನಗಳಲ್ಲಿಯೇ ಭಗವಂತನನ್ನು ಧ್ಯಾನಿಸಬೇಕು, ಅಲ್ಲಿಯೇ ಅಭಿವ್ಯಕ್ತನಾಗುತ್ತಾನೆ. ಅಲ್ಲಿಯೇ ಪ್ರಾಪ್ಯನಾಗುತ್ತಾನೆ, ಎಂಬ 3 ನಿಮಿತ್ತಗಳಿಂದ ಇದು ಅಗ್ನಿಸೂಕ್ತ, ಇದು ವಾಯುಸೂಕ್ತ, ಇತ್ಯಾದಿ ವ್ಯವಸ್ಥೆಯು ಕೂಡುತ್ತದೆಂದು ವೈಶ್ವಾನರಾಧಿಕರಣದಲ್ಲಿ ಸೂತ್ರಕಾರರೇ ಸಮರ್ಥಿಸಿರುವರು. (4) ಅಥವಾ ಪೃಥಗ್ರೂಪಾಣಿ ವಿಷ್ಣೋಸ್ತು ದೇವತಾಂತರಗಾಣಿಚ ।

ಆಗ್ನ್ಯಾದಿ ಸೂಕ್ತನಾಮಾನ್ಯಾನಿ ನಾಮ್ನಾ ಸೂಕ್ತಭಿದಾ ಭವೇತ್ ॥ ಎಂದು ಈ ಋಗ್ಭಾಷ್ಯದಲ್ಲಿ ಹೇಳಿದ ಪ್ರಕಾರ ಅಗ್ನ್ಯಾದಿ ನಾಮಭೇದದಿಂದ ಅಗ್ನ್ಯಾದಿ ಸೂಕ್ತ ವ್ಯವಸ್ಥೆಯು ಎಂದೆನ್ನಬೇಕು. (5) ಅಗ್ನಿ ಸೂಕ್ತ, ವಾಯು ಸೂಕ್ತ ಇತ್ಯಾದಿ ಪ್ರಕಾರವೇ ಪ್ರಸಿದ್ಧಿಯಿರುವುದು, ವಿಷ್ಣುಸೂಕ್ತ ಇತ್ಯಾದಿ ಪ್ರಕಾರ ಪ್ರಸಿದ್ಧಿಯಿಲ್ಲ ಎಂದರೆ ಅದು ಅಜ್ಞಾನ ಮೂಲಕವೆಂದು ಚಂದ್ರಿಕಾದಲ್ಲಿ ಸಮರ್ಥಿಸಿರುವರು. (6) ಏವಂಚ ಸರ್ವೋತ್ತಮನಾದ ಶ್ರೀ ವಿಷ್ಣುವೇ ಸ್ವರ ವರ್ಣ ಪದಾದಿ ರೂಪ ಸಮಸ್ತ ವೇದಗಳಿಂದಲೂ ಪ್ರತಿಪಾದ್ಯನೆಂದು ಸಿದ್ಧವಾಯ್ತು.

ಋಷಿ ಛಂದೋ ದೈವತಾನಿ ಜ್ಞಾತ್ವಾಽರ್ಥಂ ಚೈವ ಭಕ್ತಿತಃ । ಸ್ವಾಧ್ಯಾಯೋಽನ್ಯೈವ ಮೋಕ್ಷಃ ಸ್ಯಾದ್ವಿರಕ್ತಸ್ಯ ಹರಿಸ್ಮೃತೇಃ ॥ ಎಂದು ಸ್ಮೃತಿ, ಯೋ ಹ ವಾ ಅವಿದಿತಾರ್ಷೇಯ ಛಂದೋ ದೈವತಬ್ರಾಹ್ಮಣೇನ ಮಂತ್ರೇಣ ಯಜತಿ ಯಾಜಯತಿ ಅಧ್ಯಾಪಯತಿ ಸ ಸ್ಥಾಣುಂ ವರ್ಚ್ಛತಿ ಗರ್ತೇವಾ ಪದ್ಯತೇ ಪ್ರವಾಮೀಯತೇ ಎಂದು ಶ್ರುತಿ ಇತ್ಯಾದಿ ಪ್ರಮಾಣಗಳಿಂದ ಋಷ್ಯಾದಿಗಳ ಜ್ಞಾನವಿದ್ದರೇನೇ ಮಂತ್ರಾರ್ಥ ಜ್ಞಾನವು ಸಫಲವಾಗುವುದು. ಇಲ್ಲವಾದರೆ ಅನರ್ಥವುಂಟಾಗುವುದು. ಎಂದು ತಿಳಿಯುವುದರಿಂದ ಋಷ್ಯಾದಿಗಳ ಜ್ಞಾನವು ಅವಶ್ಯಕವು. ಹಾಗೆ ಛಂದಸ್ಸು, ಛಂದಸ್ಸುಗಳಿಗೆ ಅಭಿಮಾನಿದೇವತೆ, ಇವುಗಳ ಜ್ಞಾನವೂ ಅವಶ್ಯಕವೇ.

ಅದರಲ್ಲಿ ೧ನೇದ್ದು ಆಗ್ನೇಯಸೂಕ್ತವು. ೨ ವರ್ಗವು. ೯ ಋಕ್ಕುಗಳು. ಗಾಯತ್ರೀಚ್ಛಂದಸ್ಸು, ಅಗ್ನಿಯೂ, ಅಗ್ನ್ಯಂತರ್ಗತ ಅಗ್ನಿನಾಮಕ ಶ್ರೀವಿಷ್ಣುವೂ ದೇವತೆಯು. ಅಗ್ನಿಮೀಳೇ ಎಂದಾರಂಭಿಸಿ, ಅಗ್ನಿಂ ದೂತಂ ಎನ್ನುವುದಕ್ಕಿಂತ ಮೊದಲಿನ ೧೧೦ ಋಕ್ಕುಗಳಿಗೆ ಮಧುಃಛಂದಸರೇ ಋಷಿಗಳು. ಅಗ್ನಿಮೀಳೇ ಎಂದಾರಂಭಿಸಿ ಗಾಯಂತಿ ತ್ವಾ ಎನ್ನುವುದಕ್ಕಿಂತ ಮೊದಲಿನ ೯ ಸೂಕ್ತಗಳಲ್ಲಿ ಗಾಯತ್ರೀ ಛಂದಸ್ಸು. ಗಾಯತ್ರೀ ಛಂದಸ್ಸಿಗೆ ಶ್ರೀ ಬ್ರಹ್ಮಾಣೀ ಭಾರತೀ ಗರುಡ, ಸ್ವಾಹಾ, ಎಂಬುವರು ಐದು ಮಂದಿ ಅಭಿಮಾನಿದೇವತೆಗಳು ಎಂದು ತಿಳಿಯಬೇಕು. ॥ ೧ ॥

ಅವ ॥ ಅಗ್ನ್ಯಾದಿದೇವತೆಗಳನ್ನು ಪ್ರತಿಪಾದಿಸತಕ್ಕ ಋಕ್ಕುಗಳನ್ನು ವ್ಯಾಖ್ಯಾನಮಾಡಿದರೆ ಶ್ರೀನಾರಾಯಣನಿಗೆ ಅತಿತುಷ್ಟಿಯಾಗುವುದು. ಹೇಗೆಂದರೆ ಸಕಲವೇದಗಳೂ ಮುಖ್ಯತಃ ಭಗವಂತನ ಜ್ಞಾನವನ್ನೇ ಹುಟ್ಟಿಸುತ್ತವೆ. ಹೇಗೆಂದರೆ-

ಭಾ ॥ (1) ಓಮಶೇಷಗುಣಾಧಾರ ಇತಿ ನಾರಾಯಣೋಽಪ್ಯಸೌ।(2) ಪೂರ್ಣೋ ಭೂತಿವರೋಽನಂತಸುಖೋ ಯದ್ವ್ಯಾಹೃತೀರಿತಃ।(3)ಗುಣೈಸ್ತತಃ ಪ್ರಸವಿತಾ ವರೇಣ್ಯೋ ಗುಣೋನ್ನತೇಃ । ಭಾರತಿಜ್ಞಾನರೂಪತ್ವಾದ್ಭರ್ಗೋ ಧ್ಯೇಯೋಽಖಿಲೈರ್ಜನೈಃ ॥ ಪ್ರೇರಕೋಽಶೇಷಬುದ್ಧೀನಾಂ ಸ ಗಾಯತ್ರ್ಯರ್ಥ ಈರಿತಃ ॥ ೨ ॥

ಅ ॥ (ಓತತ್ವ ವಾಚೀ ಹ್ಯೋಂಕಾರಃ ಎಂದು ಅನುವ್ಯಾಖ್ಯಾನದಲ್ಲಿ ಹೇಳಿದ ಪ್ರಕಾರ) ಓಂಕಾರವು ಯಾವ ಕಾರಣದಿಂದ ನಿಖಿಲಗುಣಾಧಾರತ್ವವನ್ನು ಪ್ರತಿಪಾದಿಸುತ್ತದೋ ಶ್ರೀವಿಷ್ಣುವು ಸರ್ವಗುಣಗಳಿಗೂ ಆಶ್ರಯನೋ ಆದುದರಿಂದ ಓಂಕಾರವು ಶ್ರೀನಾರಾಯಣನನ್ನೇ ಪ್ರತಿಪಾದಿಸುತ್ತದೆ. ಮತ್ತು ನಾರಾಯಣ ಶಬ್ದವು ಶ್ರೀಪರಮಾತ್ಮನಲ್ಲಿಯೇ ಪ್ರಸಿದ್ಧವು, ಅದು ಶ್ರೀ ಹರಿಯು ಸರ್ವಗುಣಗಳಿಂದ ಪರಿಪೂರ್ಣನು ಎಂದು ಹೇಳುವುದು. ಆ ಸಾಮ್ಯದಿಂದ ಓಂಕಾರವೂ ಕೂಡ ಶ್ರೀನಾರಾಯಣನನ್ನೇ ಪ್ರತಿಪಾದಿಸುತ್ತದೆ ಎಂದು ನಿಶ್ಚಯವಾಗುತ್ತದೆ. (೨) ಯಾವಕಾರಣದಿಂದ ಹಿಂದೆ ಹೇಳಿದ ಪ್ರಕಾರ ಶ್ರೀಹರಿಯು ಓಂಕಾರದ ಅರ್ಥಭೂತನೋ, ಅದ ಕಾರಣ ಪ್ರಣವಾರ್ಥ ವ್ಯಾಹೃತಯೋ ವ್ಯಾಹೃತಿತ್ರಿಗುಣಾ ಪುನಃ

ವೇದಮಾತಾ ಚ ಗಾಯತ್ರೀ ಎಂಬ ಸ್ಮೃತಿಯಿಂದ ಭೂಃ ಭುವಃ ಸುವಃ ಎಂಬ ವ್ಯಾಹೃತಿತ್ರಯವು ಓಂಕಾರದಲ್ಲಿದ್ದ ಅ, ಉ, ಮ್, ಎನ್ನುವ ಮೂರುವರ್ಣಗಳ ವ್ಯಾಖ್ಯಾನ ರೂಪವೆಂದು ತಿಳಿಯುವುದರಿಂದ ಶ್ರೀಹರಿಯೇ ವ್ಯಾಹೃತಿಯಿಂದ ಪ್ರತಿಪಾದ್ಯನು.(ಯಾವನಿಮಿತ್ತದಿಂದಎಂದರೆ) ಪೂರ್ಣಃ=ಭೂಬ ಹೌ ಬಹುಃ ಪೂರ್ಣತಾಯಾಂ ಎಂದು ಮಹಾವ್ಯಾಕರಣದಲ್ಲಿ ಹೇಳಿರುವುದರಿಂದ ಸರ್ವಗುಣಪರಿಪೂರ್ಣನಾದುದರಿಂದ ಭೂಃ ಎನಿಸುತ್ತಾನೆ. ಭೂಃ= ಪೂರ್ಣತ್ವವು. ಭೂತಿವರಃ=ಐಶ್ವರ್ಯದ ನಿಮಿತ್ತದಿಂದ ಶ್ರೀಶ್ವನು, ಅಂದರೆ ಮಹೈಶ್ವರ್ಯವುಳ್ಳವನಾದುದರಿಂದ ಭುವಃ ಎನಿಸುತ್ತಾನೆ. (ಭೂಸತ್ತಾಯಾಂ, ವರಶಬ್ದದ ಅಂತ್ಯವಾದ ರ ಕಾರಕ್ಕೆ ಲೋಪವು)ಸುವಃ=ಸುಃ=ಶೋಭನವಾದ(ಅಪರಿಮಿತವಾದ)ವಃ=(ವಃ ಪುಮಾನ್ ವರುಣೇ ಕುಂಭೇ ವಿಕಲ್ಪೇ ಗಗನೇ ಗುರೌ। ಕಲಭೇ ಖಗಗರ್ಭೇ ಚ ಮದೇ (ಹರ್ಷದಲ್ಲಿ) ಬಾಲ್ಯೇ ಚ ಶರ್ಮಣಿ॥ ಎಂದು ಏಕಾಕ್ಷರಮಾಲಾದಲ್ಲಿ ಹೇಳಿದ ಪ್ರಕಾರ) ಸುಖವು ಯಾರಿಗೋ ಎಂಬ ವ್ಯುತ್ಪತ್ತಿಯಿಂದ ಅಪರಿಮಿತ ಸುಖವುಳ್ಳವನಾದುದರಿಂದ ಸುವಃ ಎನಿಸುತ್ತಾನೆ. ಸ್ವಃ=ಎಂಬ ಕಲ್ಪದಲ್ಲಿ ಸು ಎನ್ನುವಲ್ಲಿದ್ದ ಉ ಕಾರಕ್ಕೆ ಲೋಪವು. ಏವಂಚ ಯಾವ ಕಾರಣದಿಂದ ಗುಣಪೂರ್ಣತ್ವಾದಿಗಳುಳ್ಳವನೇ ವ್ಯಾಹೃತಿ ಪ್ರತಿಪಾದ್ಯನೋ ಅಂತಹನು ಪರಮಾತ್ಮನೇ. ಆದಕಾರಣ ಶ್ರೀಹರಿಯೇ ವ್ಯಾಹೃತಿ ಪ್ರತಿಪಾದ್ಯನು. (೩) ಯಾವ ಕಾರಣ ದಿಂದ ಶ್ರೀ ಹರಿಯೇ ವ್ಯಾಹೃತಿ ಪ್ರತಿಪಾದ್ಯನೋ, ಆದಕಾರಣ ಗಾಯತ್ರಿಯು ವ್ಯಾಹೃತಿಯ ಅರ್ಥವಾದುದ ರಿಂದ ಶ್ರೀ ಹರಿಯೇ ಗಾಯತ್ರಿಯ ಅರ್ಥ ಭೂತನೆಂದು ಹೇಳಲ್ಪಟ್ಟಿರುತ್ತಾನೆ. ಹೇಗೆಂದರೆ, ಯಾವ ಕಾರಣದಿಂದ ಜ್ಞಾನಾನಂದಾದಿಗುಣಗಳಿಂದ ವ್ಯಾಪ್ತನೋ, ಆದಕಾರಣ ತತ್‌ಸರ್ವಜಗತ್ತಿಗೂ ಮುಖ್ಯತಃ ಜನಕನಾದುದರಿಂದ ಸವಿತಾ. ಜ್ಞಾನಾನಂದಾದಿ ಗುಣಾಧಿಕ್ಯನಿಮಿತ್ತದಿಂದ ಸರ್ವರಿಂದ ಭಜಸಲರ್ಹನಾದು ದರಿಂದ ವರೇಣ್ಯ. (ಭಾ ದೀಪ್ತೌ, ರಮು ಕ್ರೀಡಾಯಾಂ. ಗಮ್ಲೃ ಗತೌ ಈ ಧಾತುಸಮುದಾಯದಿಂದ ಅಸುನ್ ಪ್ರತ್ಯಯವು, ಎಂಬ ವ್ಯುತ್ಪತ್ತಿಯಿಂದ) ಪ್ರಕಾಶವಿಶೇಷ, ಕ್ರೀಡಾ ಜ್ಞಾನಸ್ವರೂಪನಾದುದ ರಿಂದ ಭರ್ಗಃ ಎಂದು ಸರ್ವಜನರಿಂದಲೂ ಧ್ಯಾನಾರ್ಹನು. ಯಾವಾತನು ಸರ್ವರಬುದ್ಧಿಗಳಿಗೆ ಪ್ರೇರಕನೋ, ಅಂತಹನೇ ಗಾಯತ್ರಿಯ ಅರ್ಥ ಭೂತನೆಂದು ಹೇಳಲ್ಪಟ್ಟಿರುತ್ತಾನೆ. ಏವಂಚ ಯಃ= ಯಾವಾತನು, ನಃ=ನಮ್ಮ (ಅಂದರೆ ಅಶೇಷ ಜೀವರ) ಧಿಯಃ=ಧರ್ಮಾದಿ ವಿಷಯಕ ಬುದ್ಧಿಗಳನ್ನು ಪ್ರಚೋದಯಾತ್=ಪ್ರೇರೇಪಿಸುವನೋ, ಸವಿತುಃ ದೇವಸ್ಯ=ಅಂತಹ ಸರ್ವ ಜಗತ್ಸೃಷ್ಟಿ ಕರ್ತನಾದ ಕ್ರೀಡಾದಿಗುಣ ವಿಶಿಷ್ಟನಾದ ಶ್ರೀನಾರಾಯಣನ, ತತ್=ಸರ್ವ ಗುಣಗಳಿಂದ ವ್ಯಾಪ್ತವಾದ, ವರೇಣ್ಯಂ= ಆದುದರಿಂದಲೇ ಸರ್ವರಿಂದಲೂ ಭಜಿಸಲಿಕ್ಕೆ ಅರ್ಹವಾದ ಭರ್ಗಃ=ಪ್ರಕಾಶ ಕ್ರೀಡಾ ಜ್ಞಾನಸ್ವರೂಪವಾದ ರೂಪವನ್ನು ಧ್ಯಾನಿಸುವೆವು. ॥ ೧ ॥

ಅವ ॥ ಶ್ರೀಹರಿಯು ಗಾಯತ್ರಿಯಿಂದ ಪ್ರತಿಪಾದ್ಯನಾದಾಗ್ಯೂ ಪ್ರಕೃತ ಏನಾಯಿತೆಂದರೆ—

ಭಾ ॥ (1) ಸ ಪೂರ್ಣತ್ವಾತ್ಪುಮಾನ್ನಾಮ ಪೌರುಷೇ ಸೂಕ್ತ ಈರಿತಃ। (2) ಸ ಏವಾಖಿಲ ವೇದಾರ್ಥಃ ಸರ್ವಶಾಸ್ತ್ರಾರ್ಥ ಏವ ಚ ॥ (3) ಸ ಏವ ಸರ್ವಶಬ್ದಾರ್ಥಃ (4) ಇತ್ಯಾಹೋಪನಿಷತ್ಪರಾ ತಾ ವಾ ಏತಾ ಋಚ ಇತಿ (5)ವಿಶೇಷೇಣಾಪ್ಯೃಗರ್ಥತಾಂ॥ (6) ಯೋ ದೇವಾನಾಮಿತಿ ಶ್ರುತ್ವಾ ದೇವನಾಮ್ನಾಂ ವಿಶೇಷತಃ । ಸ್ಪಷ್ಟತ್ವಾತ್ತಸ್ಯ ತತ್ವೇನ ॥ ೨ ॥

ಅ ॥ (1) ಯಾವ ಕಾರಣದಿಂದ ಶ್ರೀಹರಿಯು ಗಾಯತ್ರೀಪ್ರತಿಪಾದ್ಯನೋ, ಆದಕಾರಣ ಶ್ರೀ ಹರಿಯು ಗಾಯತ್ರೀ ಪ್ರತಿಪಾದ್ಯನಾದುದರಿಂದ ಶ್ರೀಹರಿಯೇ ಪುರುಷ ಸೂಕ್ತದಲ್ಲಿ ಪ್ರತಿಪಾದಿಸಲ್ಪಟ್ಟಿರು

ತ್ತಾನೆ. (ಹಾಗಾದರೆ ಪುರುಷಸೂಕ್ತದಲ್ಲಿ ಪುರುಷನಾಮಕ ಪಶುವು ಪ್ರತಿಪಾದ್ಯವು. ಶ್ರೀ ವಿಷ್ಣುವು ಪ್ರತಿಪಾದ್ಯನಲ್ಲ, ಎಂದರೆ ಹಾಗೆ ಹೇಳಕೂಡದು.)(ಏಕೆಂದರೆ) ಸರ್ವಗುಣ ಪರಿಪೂರ್ಣನಾದುದರಿಂದ ಪುಮಾನ್= ಪುರುಷನೆಂದರೆ ಆ ಶ್ರೀವಿಷ್ಣುವೇ. (2) (ಇದಾಗ್ಯೂ ಪ್ರಕೃತವೇನಾಯಿತೆಂದರೆ) ಯಾವ ಕಾರಣದಿಂದ ಶ್ರೀಹರಿಯು ಪುರುಷ ಸೂಕ್ತಪ್ರತಿಪಾದ್ಯನೋ, ಆದಕಾರಣ ವೇದಾಃ ಪುರುಷಸೂಕ್ತಗಾಃ ಎಂಬ ಪ್ರಮಾಣದಿಂದ ಎಲ್ಲಾ ವೇದಗಳು ಪುರುಷ ಸೂಕ್ತದ ಅರ್ಥಗಳಾಗಿರುವುದರಿಂದ) ಆ ಶ್ರೀಹರಿಯೇ ಸಮಸ್ತ ವೇದಗಳಿಂದ ಪ್ರತಿಪಾದ್ಯನು (ಆದುದರಿಂದ ಸ್ಮೃತಿಗಳೆಲ್ಲವೂ ಶ್ರುತಿ ಮೂಲಕಗಳಾಗಿರುವುದರಿಂದ) ಆ ಶ್ರೀಹರಿಯೇ ಸಮಸ್ತ ಶಾಸ್ತ್ರಗಳಿಂದಲೂ ಪ್ರತಿಪಾದ್ಯನು. (3) (ಸರ್ವಶಾಸ್ತ್ರ ಪ್ರತಿಪಾದ್ಯನಾದುದರಿಂದ) ಆ ಶ್ರೀಹರಿಯೇ ಸರ್ವ ಶಬ್ದಗಳಿಂದಲೂ ವಾಚ್ಯನು. (ಏಕೆಂದರೆ ಸರ್ವಶಬ್ದಗಳೂ ವೇದ ಪ್ರತಿಪಾದ್ಯಗಳೇ.) (ಇಲ್ಲಿ ಶ್ರೀವಿಷ್ಣುವು ಸಮಸ್ತ ವೇದ ಪ್ರತಿಪಾದ್ಯನು ಎನ್ನುವುದೇ ಪ್ರಕೃತ ಉಪಯುಕ್ತವಾಗಿರುವುದರಿಂದ ಸರ್ವಶಾಸ್ತ್ರ ಪ್ರತಿಪಾದ್ಯನು. ಸರ್ವಶಬ್ದ ಪ್ರತಿಪಾದ್ಯನು ಎನ್ನುವುದು ಎರಡು ಪ್ರಸಂಗಸಂಗತಿಯಿಂದ ಹೇಳಿದ್ದು.) (4) ಈಶ್ವರಃ ಸರ್ವವೇದಾರ್ಥಃ ತದ್ವ್ಯಾಖ್ಯೇಯ ಪುರುಷಸೂಕ್ತಾರ್ಥತ್ವಾತ್ ಯೋ ಯದ್ವ್ಯಾಖ್ಯೇಯಾರ್ಥಃ ಸಃ ವ್ಯಾಖ್ಯಾನ ರೂಪ ಗ್ರಂಥಾರ್ಥಃ, ಯಥಾ ರಾಮಾಯಣಾರ್ಥೋ ರಾಮಃ ತಟ್ಟೀಕಾರ್ಥ.) ಎನ್ನುವ ಅನುಮಾನದಿಂದ ಶ್ರೀಹರಿಯು ಸಮಸ್ತವೇದಗಳಿಂದಲೂ ವಾಚ್ಯನೆಂದು ಸಾಧಿಸಿ ಶ್ರುತಿಯಿಂದಲೂ ಸಾಧಿಸುತ್ತಾರೆ.) ಶ್ರೀಹರಿಯೇ ಸಮಸ್ತ ವೇದಗಳ ಅರ್ಥಭೂತನು ಎಂದು ಹೇಳಿದ ಅರ್ಥವನ್ನು 'ತಾವಾ ಏತಾಃ ಸರ್ವಾ ಋಚಃ ಸರ್ವೇ ವೇದಾಃ ಸರ್ವೇ ಘೋಷಾಃ ಏಕೈವ ವ್ಯಾಹೃತಿಃ ಪ್ರಾಣ ಏವ ಎಂದು ಉತ್ಕೃಷ್ಟವಾದ (ಸ್ಪಷ್ಟವಾಗಿ ಪ್ರತಿಪಾದಿಸುವ) ಐತರೇಯೋಪನಿಷತ್ತೂ ಕೂಡ ಹೇಳುತ್ತದೆ. (5) (ಹಾಗಾದರೆ ಸಮಸ್ತವೇದಗಳೂ ಭಗವತ್ಪರಗಳಾಗಿರುವುದರಿಂದ ಯಾವುದಾದರೊಂದು ವೇದದ ವ್ಯಾಖ್ಯಾನಾದಿಗಳೂ ಶ್ರೀಹರಿಗೆ ತುಷ್ಟಿಯನ್ನುಂಟು ಮಾಡುತ್ತವೆ. ಆದಕಾರಣ ಋಕ್ಕುಗಳನ್ನೇ ವ್ಯಾಖ್ಯಾನ ಮಾಡುವುದು ಏತಕ್ಕೆ? ಎಂದರೆ) ಋಕ್ಕುಗಳು ವೇದಗಳಲ್ಲಿಯೇ ಅಡಕವಾಗಿರುವುದರಿಂದ ಸರ್ವೇ ವೇದಾಃ ಎಂದು ಹೇಳಿ, ಸರ್ವಾಃ ಋಚಃ ಎಂದು ತಿರುಗಿ ಹೇಳಿದುದರಿಂದ ವಿಶೇಷತಃ ಶ್ರೀಹರಿಯು ಋಕ್ಕುಗಳಿಂದ ಪ್ರತಿಪಾದ್ಯನೆಂದು ಉಪನಿಷತ್ತೂ ಹೇಳುತ್ತದೆಂದು ತಿಳಿಯುತ್ತೇವೆ. (ಇಲ್ಲವಾದರೆ ಸರ್ವಾ ಋಚಃ ಎಂದು ಪ್ರತ್ಯೇಕ ಹೇಳಿದ್ದೂ ವ್ಯರ್ಥವಾಗುವುದು. ಆದಕಾರಣ ಋಕ್ಕುಗಳ ವ್ಯಾಖ್ಯಾನಾದಿಗಳು ಶ್ರೀಹರಿಗೆ ಅತಿತುಷ್ಟಿಯನ್ನುಂಟುಮಾಡುವುದರಿಂದ ಋಕ್ಕುಗಳ ವ್ಯಾಖ್ಯಾನಾದಿಗಳನ್ನೇ ಮಾಡುತ್ತೇವೆ.) (6) (ಇತರ ವೇದಗಳಿಗಿಂತ ವಿಶೇಷತಃ ಋಕ್ಕುಗಳು ಪರಮೇಶ್ವರ ಪ್ರತಿಪಾದಕಗಳು ಎನ್ನುವುದು ಹೇಗೆಂದರೆ)ಯೋ ದೇವಾನಾಂ ನಾಮಧಾ ಏಕ ಏವ ಎನ್ನುವ ಶ್ರುತಿಯಿಂದ ಅಗ್ನಿ ಸೂರ್ಯ ಮೊದಲಾದ ದೇವತೆಗಳ ನಾಮಗಳು ಭಗವದ್ವಾಚಕಗಳಾಗಿರುವ ಕಾರಣ ಋಕ್ಕುಗಳುಭಗವದ್ವಾಚಕಗಳೆನ್ನುವುದು ವಿಶೇಷತಃ ಸ್ಪಷ್ಟವಾಗಿರುವುದರಿಂದ ವಿಶೇಷವಾಗಿಯೂ ಈಶ್ವರನು ಋಕ್ಕುಗಳಿಂದ ಪ್ರತಿಪಾದ್ಯನು ಎಂದು ಉಪನಿಷತ್ತು ಹೇಳುತ್ತದೆ.

ವಿ॥ (1)ವಸಂತೇ ವಸಂತೇ ಜ್ಯೋತಿಷಾ ಯಜೇತ ಇತ್ಯಾದಿ ವೇದಗಳು ಆಪಾತತಃ ಕರ್ಮಕಾಲಾದಿಗಳನ್ನು ಬೋಧಿಸುವುದರಿಂದ ಅಜ್ಞರಿಗೆ ಭಗವಂತನನ್ನು ಬೋಧಿಸುತ್ತವೆಎಂಬ ಜ್ಞಾನವುಂಟಾಗುವುದಿಲ್ಲ. ಅಗ್ನಿಮೀಳೇ ಇತ್ಯಾದಿ ಋಕ್ಕುಗಳು ಅಗ್ನ್ಯಾದಿ ದೇವತೆಗಳ ಗುಣಗಳನ್ನು ಪ್ರತಿಪಾದಿಸುವುದರಿಂದ ಅಗ್ನ್ಯಾದಿ ದೇವತಾಶಬ್ದವು ಭಗವತ್ಪರವೆಂದು ಹೇಳೋಣ. ಆ ಮಂತ್ರೋಕ್ತ ಗುಣಗಳು ಭಗವತ್ಪರಗಳೆಂದ ಸುತರಾಂ ಸಿದ್ಧವಾಗುತ್ತವೆ. ಆದ ಕಾರಣ ಋಕ್ಕುಗಳು ಭಗವತ್ಪರಗಳೆನ್ನುವಲ್ಲಿ ಅತಿಪ್ರಯತ್ನವಿಲ್ಲ ಆದ ಕಾರಣ ಋಕ್ಕುಗಳು ವಿಶೇಷತಃ ಭಗವದ್ವಾಚಕಗಳೆಂದು ಹೇಳಿದ್ದು. (2) **ಋಚಸ್ತು ವಿಶೇಷತಃ ಇಂದ್ರಾದಿ ನಾಮವತೋ ವಿಷ್ಣೋರ್ಗುಣಾನಲ್ಪಜ್ಞಾನಾಮಪಿ ಪ್ರಕಾಶಯಂತೀತಿಪ್ರಾಣೇ ನಾರಾಯಣ ಏವೇತಿ ವಿದ್ಯಾತ್** ಋಕ್ಕುಗಳಾದರೂ ಅಲ್ಪ ಜ್ಞಾನಿಗಳಿಗೂ ಇಂದ್ರ ಸೂರ್ಯ ಮೊದಲಾದ ನಾಮ

ವುಳ್ಳ ಶ್ರೀವಿಷ್ಣುವಿನ ಗುಣಗಳನ್ನು ವಿಶೇಷತಃ ಪ್ರಕಾಶಗೊಳಿಸುತ್ತವೆ, ಎಂದು ಋಕ್ಕುಗಳು ನಾರಾಯಣ ನನ್ನೇ ಪ್ರತಿಪಾದಿಸುತ್ತವೆ ಎಂದು ತಿಳಿಯ ಬೇಕು ಎಂದು ಐತರೇಯಭಾಷ್ಯದಲ್ಲಿ ಹೇಳಿದೆ. (3)ಹುಂಕಾರೇಣ ಸದೈವಾಬ್ಧಿಃ ಸರ್ವಾಭಿಭವಶಕ್ತತಾಂ । ವಿಷ್ಣೋರ್ವಕ್ತಿ ಯತೊ ಹುಂ ಹಿಂ ಪರಾಭಿಭವವಾಚಕಃ । ಓಮಿತಿ ಸ್ವರತೇ ನಿತ್ಯಂ ವಾಯುರ್ಮೇಘೇಷು ಸಂಸ್ಥಿತಃ । ಬಲವತ್ತ್ವಾದ ಸಂಯುಕ್ತೋ ಹ್ಯಧಿಕೋಚ್ಚತ್ವಮಸ್ಯತು । ಓಂಕಾರಸ್ಯಾರ್ಥ ಉದ್ದಿಷ್ಟಃ ಉಕ್ತಾರ್ಥಾಧಿಕ್ಯಮೇವಚ । ನಾದೋ ಬಲೀ ಪ್ರವದತಿ ತಥಾ ಭೇರೀಧ್ವನಿಃ ಪ್ರಭೋಃ । ಅನುದಾತ್ತಸ್ವರೂಪತ್ವಾದೌದಾರ್ಯಂ ವದತೀಶಿತುಃ । ತದಪೇಕ್ಷಯಾ ಹ್ಯನೀಚತ್ವಂ ಘಂಟಾಯಾಃ ಸ್ವರಿತಾತ್ಮತಃ । ಉಚ್ಚಸ್ಥಿತಿಮುದಾತ್ತಸ್ತು ಸ್ವರ್ಣಚಂಚ್ವಾದಿಕಃ ಸ್ವರಃ । ವಿಷ್ಣೋರ್ವಕ್ತಿ ತಥಾ ಮಂದ್ರಃ ಶ್ವಾಸಾದಿಪ್ರಥನಾತ್ಮಕಃ । ಏಕಪ್ರಕಾರತಾಂ ವಿಷ್ಣೋಃ ಸದಾ ಚಾಲ್ಯಾಂ ವದತ್ಯಪಿ ॥ ಎಂದು ಬೃಹತ್ಸಂಹಿತೆಯಲ್ಲಿ ಹೇಳಿದಪ್ರಕಾರ ಸಮುದ್ರಾದಿ ಘೋಷಗಳೂ ಕೂಡ ಭಗವದ್ವಾಚಕಗಳೆಂದು ಸಿದ್ಧಿಸುತ್ತವೆ ॥೨॥

ಅವ ॥ ಹೀಗೆ ವ್ಯಾಖ್ಯಾನ ಮಾಡಲಿಕ್ಕೆ ಆವಶ್ಯಕವಾದ ಋಗ್ವೇದದ ೨೧ ಪ್ರಭೇದಗಳಲ್ಲಿ ಇದು ಶಾಕಲ ಶಾಖೆಯು. ಇದರಲ್ಲಿ ೬೪ ಅಧ್ಯಾಯಗಳು. ೧೦ ಮಂಡಲಗಳು. ೨೦೦೬ ವರ್ಗಗಳು, ೧೦೦೧ ಸೂಕ್ತಗಳು ಇಂತಹ ಶಾಕಲ ಶಾಖೆಯ ೧ ನೇ ಮಂಡಲದ ೧ ನೇ ಅಧ್ಯಾಯದ ೧ನೇ ಅನುವಾಕದ ೩ ಸೂಕ್ತಗಳಲ್ಲಿ ೧ ನೇ ಸೂಕ್ತವು ವ್ಯಾಖ್ಯಾನಾರ್ಹವಾಯ್ತು. ಹೀಗೆ ಇಂತಹ ಋಕ್ಕುಗಳ ಅರ್ಥವನ್ನು ಅವಶ್ಯವಾಗಿ ಹೇಳಬೇಕೆಂದು ಉಪಪಾದಿಸಿ ಈಗ ೧ನೇ ಸೂಕ್ತದ ತಾತ್ಪರ್ಯವನ್ನು ಹೇಳುತ್ತಾರೆ.

ಭಾ ॥ (೧) ತತ್ರಾಹಾಗ್ರೇಽಗ್ನಿನಾಮಕಂ । ಅಗ್ರಣೀತ್ವಂ ಯದಗ್ನಿತ್ವಮಿತ್ಯಗ್ರೇ ನಾಮ ತದ್ಭವೇತ್ ॥ (೨) ಏವಮೇವಾಹ ಭಗವಾನ್ನಿರುಕ್ತಿಂ ಬಾದರಾಯಣಃ ॥ (೩) ಯಥೈವಾಗ್ನ್ಯಾದಯಶ್ಶಬ್ದಾಃ ಪ್ರವರ್ತಂತೇ ಜನಾರ್ದನೇ ॥ ತಥಾ ನಿರುಕ್ತಿಂ ವಕ್ಷ್ಯಾಮೋ ಜ್ಞಾನಿನಾಂ ಜ್ಞಾನಸಿದ್ಧಯೇ॥ ಇತಿ ತೇನ ॥ ೩ ॥

ಅ॥ (೧) ಆ ಋಕ್ಕುಗಳಲ್ಲಿ ಪ್ರಥಮ ಸೂಕ್ತದಲ್ಲಿ ಅಗ್ನಿನಾಮಕ ಭಗವಂತನನ್ನು ವೇದವು ಪ್ರತಿಪಾದಿಸುತ್ತವೆ. (ಅಗ್ನಿನಾಮಕ ಭಗವಂತನನ್ನು ಪ್ರಥಮತಃ ಪ್ರತಿಪಾದಿಸಲಿಕ್ಕೆ ಏನು ಕಾರಣವು ಎಂದರೆ) ಯಾವ ಕಾರಣದಿಂದ ಅಗ್ನಿ ಶಬ್ದವಾಚ್ಯನು ಪ್ರವೃತ್ತಿ ಪಾದ್ಯಸ್ತುತ್ಯಾದಿಗಳಲ್ಲಿ ಸರ್ವರಿಗಿಂತ ಪ್ರಥಮದಲ್ಲಿ ಸ್ತುತಿಸಲ್ಪಡುತ್ತಾನೋ, (ಅಂದರೆ ಸರ್ವರಿಗಿಂತ ಪ್ರಥಮತಃ ಪೂಜ್ಯನಾಗಿರುತ್ತಾನೋ) ಆದ ಕಾರಣ ಆತನೇ ಅಗ್ರಣೀಃ ಎನ್ನಿಸುತ್ತಾನೆ. ಆದ ಕಾರಣ ಅಗ್ನಿ ಎಂಬ ನಾಮವು ಪ್ರಥಮ ಸೂಕ್ತದಲ್ಲಿ ಪ್ರಯುಕ್ತವಾಗಿದೆ. (ಅಂತಹ ಗುಣವನ್ನೇ ಅಗ್ನಿಶಬ್ದವು ಶ್ರೀಹರಿಗೆ ಪ್ರತಿಪಾದಿಸುತ್ತದೆ.) (ಆದ ಪ್ರಯುಕ್ತ ಅಗ್ನಿ ಎಂಬ ನಾಮದಿಂದಲೇ ಪ್ರಥಮತಃ ಶ್ರೀಹರಿಯನ್ನು ಸ್ತುತಿಸಿದ್ದು ಯುಕ್ತವು.) (೨) (ಈ ವಿಷಯದಲ್ಲಿ ವೃದ್ಧಸಂಮತಿಯನ್ನು ಹೇಳುತ್ತಾರೆ) ಈ ಅಭಿಪ್ರಾಯದಿಂದಲೇ ಅಗ್ನಿ ಶಬ್ದವನ್ನು ಆದಿಯನ್ನಾಗಿ ಮಾಡಿ ಷಡ್ಗುಣ ಪರಿಪೂರ್ಣರಾದ ವೇದವ್ಯಾಸರು, ಸರ್ವಶಬ್ದಗಳೂ ಭಗವತ್ಪರಗಳು ಎಂಬ ಅಭಿಪ್ರಾಯದಿಂದ ನಿರ್ವಚನವನ್ನು ಹೇಳಿರುವರು. (೩) ಯಾವ ರೀತಿಯಾಗಿ ನಿರ್ವಚನ ಮಾಡಿದರೆ ಅಗ್ನಿ ಮೊದಲಾದ ಶಬ್ದಗಳು ಶ್ರೀಪರಮಾತ್ಮನಲ್ಲಿ ಪ್ರವೃತ್ತಗಳಾಗುತ್ತವೋ, ಹಾಗೆ ನಿರುಕ್ತಿಯನ್ನು ಜ್ಞಾನಿಗಳಿಗೆ ಜ್ಞಾನವು ಸಿದ್ಧಿಯಾಗುವುದಕ್ಕಾಗಿ ಹೇಳುವೆವು (ಹೀಗೆ ಪ್ರತಿಜ್ಞಾ ವಾಕ್ಯದಿಂದ ಅಗ್ನಿ ಶಬ್ದವನ್ನು ಆದಿಯನ್ನಾಗಿ ಮಾಡಿ ನಿರುಕ್ತಿಯನ್ನು ವೇದವ್ಯಾಸರು ಮಾಡಿರುವರು ಎಂದು ತಿಳಿಯುತ್ತದೆ.) (ನಿರವಧಿಕ ಜ್ಞಾನಾದಿಗಳುಳ್ಳ ವೇದವ್ಯಾಸರು ಭ್ರಮಾದದಿಂದ ಹೇಳಿರುವರು ಎಂದು ಹೇಳಲಾಗುವುದಿಲ್ಲ. ಮತ್ತು ಇದನ್ನು ಬಿಟ್ಟು ಕಾರಣಾಂತರವನ್ನು ಕಲ್ಪಿಸಲಿಕ್ಕೆ ಪ್ರಮಾಣ ವಿಲ್ಲ)

(ಯಾವ ಕಾರಣದಿಂದ ಹೀಗೆ ಅಗ್ನಿ ಶಬ್ದವನ್ನು ಪ್ರಥಮದಲ್ಲಿ ಪ್ರಯೋಗಿಸಿದ್ದು ಯುಕ್ತವೋ) ಆ ಕಾರಣದಿಂದ ಆ ಋಕ್ಕುಗಳಲ್ಲಿ ಪ್ರಥಮ ಸೂಕ್ತದಲ್ಲಿ ಅಗ್ನಿನಾಮಕ ಭಗವಂತನನ್ನು ವೇದವು ಪ್ರತಿಪಾದಿಸಿಯದೆ. (ಅತಿ ಪ್ರಾಚೀನ ನಿರುಕ್ತಿ, ಮಹಾವ್ಯಾಕರಣಾದಿಗಳನ್ನು ಅನುಸರಿಸಿಯೇ ನಾವು ವ್ಯಾಖ್ಯಾನ ಮಾಡಿರುವುದರಿಂದ ಯಾಸ್ಕನಿರುಕ್ತಿ ಪಾಣಿನಿವ್ಯಾಕರಣ ಇತ್ಯಾದಿಗಳಿಂದ ವಿರೋಧವು ಅನಾದರಣೀಯವೆಂದು ಸೂಚಿತವಾಯಿತು.
॥ ೩ ॥

ಹರಿಃ ಓಂ ೩ ವರ್ ॥ ಅಗ್ನಿಮೀಳೇ ಪುರೋಹಿತಂ ಯಜ್ಞಸ್ಯ ದೇವಮೃತ್ವಿಜಂ । ಹೋತಾರಂ ರತ್ನಧಾತಮಮ್ ॥ (ಇದು ವ್ಯಾಖ್ಯಾತವಾಗಿದೆ.॥)
॥ ೧ ॥

**ಅವ** ॥ ಅಗ್ನಿಮೀಳೇ ಇತ್ಯಾದಿ ಋಕ್ಕುಗಳ ಅರ್ಥವು (೧) ಪ್ರಸಿದ್ಧ ಅಗ್ನ್ಯಾದಿ ಪರವಾದುದು. (೨) ಅಗ್ನ್ಯಂತರ್ಗತ ಅಗ್ನಿನಾಮಕ ಭಗವತ್ಪರವಾದುದು. (೩) ಶರೀರವರ್ತ್ಲಿರತಕ್ಕ ಭಗವತ್ಪರವು. ಹೀಗೆ ೩ ವಿಧವು. ಆ ೩ ಅರ್ಥಗಳನ್ನು ಭಾಷ್ಯದಲ್ಲಿ ಶ್ರೀಮದಾಚಾರ್ಯರು ನಿರೂಪಿಸಿರುವರು. ಅವರಲ್ಲಿ ಅಗ್ನಿಮೀಳೇ ಎಂಬ ೧ನೇ ಋಕ್ಕನ್ನು ವ್ಯಾಖ್ಯಾನ ಮಾಡುತ್ತಾ ಅಗ್ನಿಶಬ್ದಾರ್ಥವನ್ನು ನಿರ್ವಚನ ಮಾಡುತ್ತಾರೆ.

**ಭಾ** ॥ (೧) ಅಗ್ನಿಶಬ್ದೋಽಯಮುಗ್ರ ಏವಾಭಿಪೂಜ್ಯತಾಂ। ಅಗ್ರ್ಯತ್ವಮಗ್ರನೇತೃತ್ವಮುತ್ತಿ (ತ್ತ)ಮಂಗಾಗನೇತೃತಾಂ । ಅಪ ಕಂ ಸ್ತೌತ್ಯಶೇಷಸ್ಯ ಪೂರ್ವಮೇವ ಹಿತಂ ಪ್ರಭುಂ(೨) ಋತ್ವಿಙ್ನಿಯಾಮಕತ್ವೇನ ಯಜ್ಞಾನಾಮೃತ್ವಿಜಂ ಸದಾ ॥ (೩)ದ್ಯೋತ (ಜ) ನಾವ್ಮಿ ಜಯಾತ್ಕಾಂತ್ಯಾ ಸ್ತುತ್ಯಾ ವ್ಯವಹೃತೇರಪಿ। ಗತ್ಯಾ ರತ್ಯಾ ಚ ದೇವಾಖ್ಯಂ(೪)ಹೋತೃ ಸಂಸ್ಥಂ ವಿಶೇಷತಃ ॥ ಅಗ್ನಿಸಂಸ್ಥೇನ ರೂಪೇಣ ಯತೋಽಗ್ನಿರ್ಹೋತೃದೇವತಃ ॥ (೫) ಇಂದ್ರಿಯಾಗ್ನಿಷು ಚಾರ್ಥಾನಾಂ ಯದ್ಧೋತಾ ಹೋತೃನಾಮಕಃ ॥ (೬) ರತಿ ಧಾರಕೋತ್ತಮತ್ವಾತ್ಸ ರತ್ನಧಾತಮ ಈರಿತಃ
॥ ೧ ॥

**ಅ** ॥ (೧) ಆದಿಯಲ್ಲಿ ಪ್ರಯುಕ್ತವಾದ ಅಗ್ನಿ ಶಬ್ದವು (ಬಾಹ್ಯ ಯಜ್ಞದಲ್ಲಿ) ಅಗ್ನಿಗೂ ಅಗ್ನಿಯಲ್ಲಿ ಅಂತರ್ಗತನಾದ ಅಗ್ನಿನಾಮಕ ಶ್ರೀಹರಿಗೂ, ಅಧ್ಯಾತ್ಮದಲ್ಲಿ ಶ್ರೀಹರಿಗೆ ಜ್ಞಾನಯಜ್ಞದಲ್ಲಿ ಮುಖ್ಯ ಅಮುಖ್ಯಗಳಾಗಿ ಪೂಜ್ಯರಾದ ಸರ್ವರಿಗಿಂತಲೂ)ಮೊದಲೇ ಚೆನ್ನಾಗಿ ಭಕ್ತಿಪೂರ್ವಕವಾಗಿ ಪೂಜಿಸಲ್ಪಡುವಿಕೆಯನ್ನು ಹೇಳುತ್ತದೆ. ಹಾಗೆಯೇ ಸರ್ವರಿಗಿಂತಲೂ ಪ್ರಥಮದಲ್ಲಿರುವಿಕೆಯನ್ನು (ಅಂದರೆ ಸರ್ವೋತ್ತಮತ್ವವನ್ನು) ಹಾಗೆಯೇ ಪ್ರಥಮತಃ ಸರ್ವ ಪ್ರವರ್ತಕತ್ವವನ್ನೂ, ಅಧ್ಯಾತ್ಮಾಪೇಕ್ಷಯಾ ಬಾಹ್ಯಾರ್ಥದಲ್ಲಿ ಶ್ರೀ ಹರಿಯಲ್ಲಿ ಸಂಪತ್ಪ್ರದತ್ವವನ್ನೂ, ಅಗ್ನಿಯಲ್ಲಿಯೂ ಅಗ್ನ್ಯಂತರ್ಗತ ಶ್ರೀಹರಿಯಲ್ಲಿಯೂ ಹವಿಸ್ಸಿನ ಭೋಕ್ತೃತ್ವವನ್ನೂ, ಅಧ್ಯಾತ್ಮದಲ್ಲಿ (ಶರೀರದಲ್ಲಿ) ವಿಷಯಗಳ ಭೋಕ್ತೃತ್ವವನ್ನೂ, ಹಾಗೆಯೇ ಶರೀರದಲ್ಲಿ ಶ್ರೀ ವಿಷ್ಣುವಿಗೂ ಅಗ್ನಿಗೂ ಸರ್ವ ಶರೀರಗಳ ಪ್ರವರ್ತಕತ್ವವನ್ನೂ, ಹಾಗೆಯೇ ಸ್ವತಃ ಪ್ರವೃತ್ತಿಯುಳ್ಳ ಚೇತನ ಸಮಸ್ತ ಜಗತ್ತಿನ ಪ್ರವರ್ತಕತ್ವವನ್ನೂ, ಅಗ್ನಿ ಶಬ್ದವು ಪ್ರತಿಪಾದಿಸುತ್ತದೆ. ಅಂತಹ ಅಗ್ನಿನಾಮಕ ಶ್ರೀ ಪರಮಾತ್ಮನನ್ನು ಸ್ತುತಿಸುತ್ತೇನೆ. ನಮಸ್ಕರಿಸುತ್ತೇನೆ. (ಏಕೆಂದರೆ) ಆತನು ನಿಖಿಲ ಜಗತ್ತಿಗಾಗಿ ಅನಾದಿಕಾಲದಿಂದಲೇ ಹಿತಕರನು. ಸರ್ವರಿಗೂ ಸ್ವಾಮಿಯು, (ಸರ್ವೋತ್ತಮನು.) (೨) ಮತ್ತು ಸರ್ವದಾ ಋತ್ವಿಕ್‌ಗಳಲ್ಲಿ ನಿಯಾಮಕನಾಗಿರುವುದರಿಂದ ಬಾಹ್ಯ ಯಜ್ಞಗಳಿಗೂ ಆಧ್ಯಾತ್ಮಿಕರಾದ ಋತ್ವಿಕ್ ಎನಿಸಿರುವ ಇಂದ್ರಿಯಾಭಿಮಾನಿ ದೇವತೆಗಳಿಗೂ ಜ್ಞಾನರೂಪ ಆಧ್ಯಾತ್ಮಿಕ ಯಜ್ಞಗಳಿಗೂ ನಿಯಾಮಕ

**ಮಂ॥ (೪೫೦) ಸ್ಥಿರಂ ಹಿ ಜಾನಮೇಷಾಂ ವಯೋ ಮಾತುರ್ನಿರೇತವೇ ।**
**ಯತ್ಸೀಮನು ದ್ವಿತಾ ಶವಃ ॥ ೯ ॥**

ಅ॥ (ಎಲೋ ಮರುತ್‌ಗಳೇ.) ಏಷಾಂ=ಹಿಂದೆ ಹೇಳಿದ ಗುಣಗಳುಳ್ಳ ನಿಮ್ಮ, ಜಾನಂ=(ಜನೀ ಪ್ರಾದುರ್ಭಾವೇ.) ಜನನವು ಸ್ಥಿರಂ ಹಿ=ಸ್ಥಿರವಾಗಿರುವುದರಿಂದ ಉತ್ತಮವಾಗಿದೆ. ಹಿ=ಮರುತ್‌ಗಳು ವಾಯುದೇವರಿಂದ ಭಾರತೀದೇವಿಯಲ್ಲಿಹುಟ್ಟಿರುವುದರಿಂದ ವಿಶಿಷ್ಟಮಾತಾಪಿತೃಗಳಸಂಬಂಧವಿದ್ದುದರಿಂದ ಉತ್ತಮ ಜನ್ಮವು (ಮತ್ತು ಆ ಮರುತ್‌ಗಳು, ನಿರೇತವೇ=(ನಿರ್ ಪೂರ್ವಾತ್ ಇಣ್ ಗತೌ) ಹೊರಡುವುದಕ್ಕಾಗಿ, (ಹುಟ್ಟಿದ ಉತ್ತರ ಕ್ಷಣದಲ್ಲಿಯೇ. ಅಂದರೆ ಸಮಸ್ತ ಲೋಕಗಳನ್ನು ಸಂಚರಿಸುವುದಕ್ಕಾಗಿ) ಮಾತುಃ=ತಾಯಿಯಾದ ಭಾರತೀಯ ಪ್ರಸಾದದಿಂದ, ವಯಃ=ವಯೋ ವಿಶೇಷವಾದ ಯೌವನವನ್ನು (ಹೊಂದಿರುತ್ತಾರೆ.) (ಅಂದರೆ ಜನ್ಮಾರಭ್ಯ ಅವರು ತರುಣರೆಂದೇ ಪ್ರಸಿದ್ಧರು.) ಯತ್=ಯಾವ ಕಾರಣದಿಂದ, ಏಷಾಂ= ಈ ಮರುತ್‌ಗಳ, ಅನು=ತಾಯಿಯ ಪ್ರಸಾದವನ್ನನುಸರಿಸಿ, (ತಾಯಿಯ ಪ್ರಸಾದದಿಂದಲೇ) ಸೀಂ=ಚೆನ್ನಾಗಿ, ದ್ವಿತಾ ಶವಃ=ದ್ವಿತ್ವದಿಂದ ಕೂಡಿದ, ಅಂದರೆ ಎರಡು ವಿಧವಾದ ಪ್ರಸಿದ್ಧವಾದ ಪ್ರಜ್ಞಾಬಲವೂ ಬಾಹುಬಲವೂ ಇದೆಯೋ, ತಸ್ಮಾತ್=ಆದ ಕಾರಣ, ಪ್ರಜ್ಞಾಬಲವು ವ್ಯಾಖ್ಯಾನ ಮಾಡಲಿಕ್ಕೂ ಬಾಹುಬಲವು ದಿಗ್ವಿಜಯಕ್ಕೂ ಹೇತುವೆಂದು ಉಕ್ತವಾಗಿದೆ. ॥ ೯ ॥

**ಭಾ॥ (೧) ಸ್ಥಿರಂ ಪ್ರೋಃ ಜನನಂ (೨) ಯತಃ। ಜಾತಾ ವಾಯೋರ್ದಿವಿ (೩) ವಯೋ ಮಾತುಃ ಪ್ರಾಪ್ತಾ ನಿರೇತವೇ । ನಿರ್ಗಂತುಂ ತತ್ಕ್ಷಣೇ ನೈವ ಸರ್ವಲೋಕಾಟನಾಯ ಹಿ ॥ ಯೌವನಂ (೪) ತೇ ಯುವಾನೋ ಹಿ ನಿಸರ್ಗಾನ್ಮಾತುರಾಜನೇಃ ॥ (೫) ಮಾತುರೇವ ಪ್ರಸಾದೇನ ಸಮ್ಯಕ್ತದ್ದ್ವಿವಿಧಂ ಬಲಂ । ಪ್ರಜ್ಞಾ ಬಾಹು ಬಲಂ ಯಸ್ಮಾತ್ತಸ್ಮಾತ್ ॥ ೯ ॥**

ಅ॥ (೧) ಹಿಂದೆ ಹೇಳಿದ ಗುಣಗಳುಳ್ಳ ಮರುತ್‌ಗಳಾದ ನಿಮ್ಮ ಜನನವು ಸ್ಥಿರವಾಗಿರುವುದರಿಂದ ಉತ್ತಮವಾಗಿದೆ. (೨) (ಹೇಗೆಂದರೆ) ಯಾವ ಕಾರಣದಿಂದ (ಮರುತ್‌ಗಳು) ಪ್ರಧಾನ ವಾಯುದೇವರ ದೆಸೆಯಿಂದ ಕ್ರೀಡಾದಿ ಗುಣ ವಿಶಿಷ್ಟಳಾದ ಭಾರತಿಯಲ್ಲಿ ಹುಟ್ಟಿರುತ್ತಾರೋ, ಆದ ಕಾರಣ ವಿಶಿಷ್ಟ ಮಾತಾಪಿತೃ ಸಂಬಂಧದಿಂದ ಇವರ ಜನನವು ಉತ್ತಮವೇ, ಎಂದು ಶ್ರುತಿಯಲ್ಲಿದ್ದ ಹಿ ಶಬ್ದಾರ್ಥವು. (೩) (ಆ ಮರುತ್‌ಗಳು ನಿರೇತವೇ=ತತ್ಕ್ಷಣದಲ್ಲಿ ಹೊರಡುವುದಕ್ಕಾಗಿ ಅಂದರೆ ಹುಟ್ಟಿದ ಉತ್ತರ ಕ್ಷಣದಲ್ಲಿಯೇ, ಸಮಸ್ತ ಲೋಕಗಳ ಸಂಚಾರಕ್ಕಾಗಿ, ತಾಯಿಯಾದ ಭಾರತಿಯ ಪ್ರಸಾದದಿಂದ ವಯೋವಿಶೇಷವಾದ ತಾರುಣ್ಯವನ್ನು ಹೊಂದಿರುತ್ತಾರೆ (೪) (ತಾರುಣ್ಯ ಪ್ರಾಪ್ತಿಯು ಸರ್ವಸಾಧಾರಣವಾದುದರಿಂದ ಅದನ್ನು ಹೇಳಬೇಕಾಗಿಲ್ಲ ಎಂದರೆ) ಆ ಮರುತ್‌ಗಳು ತಾಯಿಯಾದ ಭಾರತಿಯ ಪ್ರಸಾದದಿಂದ ಸ್ವಾಭಾವಿಕವಾಗಿಯೇ, ಅಂದರೆ ಹುಟ್ಟಿದಂದಿನಿಂದ ತರುಣರೇ ಆಗಿರುತ್ತಾರೆ (೫) ಯಾವ ಕಾರಣದಿಂದ ತಾಯಿಯ ಅನುಗ್ರಹದಿಂದಲೇ, ಚೆನ್ನಾಗಿ ಎರಡು ವಿಧವಾದ ಬಲವು ಅಂದರೆ ಪ್ರಜ್ಞಾಬಲವು ಬಾಹುಬಲವೂ ಇವೆಯೋ, ಆದಕಾರಣ (ಪ್ರಜ್ಞಾಬಲವು ವ್ಯಾಖ್ಯಾನ ಮಾಡಲಿಕ್ಕೂ ಬಾಹುಬಲವು ದಿಗ್ವಿಜಯಕ್ಕೂ ಹೇತುವು.) ॥ ೯ ॥

**ಮಂ॥ (೪೫೧) ಉದು ತ್ಯೇ ಸೂನವೋ ಗಿರಃ ಕಾಷ್ಠಾ ಅಜ್ಮೇಷ್ವತ್ನತ । ವಾಶ್ರಾ**
**ಅಭಿಜ್ಞು ಯಾತವೇ ॥ ೧೦ ॥ ೧೩ ॥**

ಅ॥ ಗಿರಃ=ಭಾರತೀದೇವಿಯ, ಸೂನವಃ=ಪುತ್ರರು, ವಾಶ್ರಾಃ=(ವಾಶೃಶಬ್ದೇ) ವ್ಯಾಖ್ಯಾನ ಮಾಡ ತಕ್ಕ ಸ್ವಭಾವವುಳ್ಳವರು. ತ್ಯೇ=ಪ್ರಸಿದ್ಧರಾದ ಮರುತ್‌ಗಳು ಅಜ್ಮೇಷು=ಅಮಾರ್ಗಗಳಲ್ಲಿ ಅಂತರಿಕ್ಷಾಶ್ರಿತ ಮಾರ್ಗಗಳಲ್ಲಿ (ಆಕಾಶದಲ್ಲಿ ಸಂಚರಿಸುವವರೇ ಆಗಿ) ಕಾಷ್ಠಾಃ=ದಿಕ್ಕುಗಳನ್ನು ಉತ್ ಅತ್ನತ=(ಅತಸಾತತ್ಯಗ ಮನೇ) ಹೊಂದಿರುವರು. (ಏಕೆಂದರೆ) ಯಾವ ಕಾರಣದಿಂದ ದಿಕ್ಕುಗಳನ್ನೇ ಹೊಂದಿರುವರೋ, ಆದಕಾರಣ ಅಭಿಜ್ಞು=(ಅಭಿಪೂರ್ವಕಾತ್ ಜಶೀಪ್ರಾದುರ್ಭಾವೇ.) ಉತ್ತಮವಾದ ಜನ್ಮವನ್ನನುಸರಿಸಿ, ಉತ್ತಮ ಜನ್ಮಾನುಸಾರವಾಗಿ ಯಾತವೇ=(ಯಾ ಪ್ರಾಪಣೇ) ಗುಣಗಳನ್ನು ಹೊಂದುವುದಕ್ಕಾಗಿ ಉದತ್ನತ=ಹೊಂದಿದರು. (ಭಾರತೀ ಪುತ್ರರಾದ ಮರುತ್‌ಗಳು ವ್ಯಾಖ್ಯಾನಮಾಡಲಿಕ್ಕೆ ಉಪಯುಕ್ತವಾದ ಸಾಮರ್ಥ್ಯದಿಂದ ಕೂಡಿದ ವರು-ಇಂತಹವರು ಲೋಕಗಳನ್ನುದ್ಧರಿಸುವುದಕ್ಕಾಗಿ ದಿಗ್ವಿಜಯವನ್ನು ಮಾಡದೆ ಇದ್ದರೆ ಅವರಿಗೆ ಉತ್ತಮ ಜನ ಪ್ರಾಪ್ತಿಯು ಹೇಗೆ ತಾನೇ ಸಫಲವಾಗುವುದು? ಮಹಾಗುಣವುಳ್ಳವರು ಹೇಗೆ ತಾನೇ ಆಗುವರು? ಇಂತಹು ದಕ್ಕೆ ಸಾಮರ್ಥ್ಯವಿದೆ ಎಂಬುವುದು ಹಿಂದಿನ ಋಕ್ಕಿನಲ್ಲಿ ಹೇಳಿದೆ.) ॥ ೧೦ ॥ ೦೩ ॥

**ಭಾ॥ (೧) ದಿಶ ಉದಾಪಿರೇ। ತೇ ಗಿರಃ ಸೂನವೋ ದೇವ್ಯಾ ವಾಶ್ರಾ ವಚನಶೀಲಿನಃ। ಅಭಿ ಜನ್ಮಾನುಸಾರೇಣ ಗುಣಾನ್ಯಾತುಮುದಾಪಿರೇ ॥ ೧೦ ॥ ೧೩ ॥**

ಅ॥ (೧) ಭಾರತೀ ದೇವಿಯ ಪುತ್ರರಾದ, ವಾಶ್ರಾಃ=ಶಾಸ್ತ್ರ ವ್ಯಾಖ್ಯಾನ ಮಾಡುವ ಸ್ವಭಾವವುಳ್ಳ ಆ ಮರುತ್‌ಗಳು (ಪ್ರೇರಕರಾಗಿ) ದಿಕ್ಕುಗಳನ್ನು ಹೊಂದಿರುತ್ತಾರೆ. ಉತ್ತಮ ಜನ್ಮಾನುಸಾರವಾಗಿ ಗುಣಗ ಳನ್ನು ಹೊಂದುವುದಕ್ಕಾಗಿ ಹೊಂದಿರುತ್ತಾರೆ. ॥ ೧೦ ॥ ೦೩ ॥

## ಋ॥ (೪೫೭) ತ್ಯಂ ಚಿದ್ಘಾ ದೀರ್ಘಂ ಪೃಥುಂ ಮಿಹೋ ನಪಾತಮಮೃಧ್ರಂ ಪ್ರಚ್ಯಾವಯಂತಿ ಯಾಮಭಿಃ ॥ ೧೧ ॥

ಅ॥ (ಮರುತಃ=ಮರುತ್‌ಗಳು) ದೀರ್ಘಂ= ಬಹು ಎತ್ತರವಾದ ಪೃಥುಂ= ಬಹು ವಿಸ್ತಾರವಾದ ಅತಿ ಸ್ಥೂಲವಾದ ಅಡ್ಡವಾಗಿ ವ್ಯಾಪಿಸಿಕೊಂಡಿರುವ ಅಮೃಧ್ರಂ= ಮೃಧು ಉಂದೇ, ಉಂದೀಕ್ಲೇದನೇ) ಒದ್ದೆಯಾಗ ದಿರುವುದರಿಂದ ಸಹಿಸಲಶಕ್ಯವಾದ ಮಿಹಃ=(ಮಿಹ ಸೇಚನೇ) ಅಭೀಷ್ಟಸೇಚಕನಾದ ಶ್ರೀಹರಿಯ ಮಗಳಾದ ಧರಾದೇವಿಯಿಂದ ಹುಟ್ಟಿದ ಪರ್ವತಗಳ ಸಮುದಾಯವನ್ನು ನಪಾತಂ=ನಪ್ತೃಭೂತವಾದ, (ಪೌತ್ರಭೂತವಾದ ತ್ಯಂಚಿತ್=ಪ್ರಸಿದ್ಧ ಮೇರ್ವಾದಿಗಳನ್ನೂ ಯಾಮಭಿಃ=(ಯಾ ಪ್ರಾಪಣೇ) ಗಮನಗಳಿಂದ, ಪ್ರಚ್ಯಾವಯಂತಿ= ತಮ್ಮ ಸ್ಥಾನಕ್ಕಿಂತ ಚ್ಯುತಗಳನ್ನಾಗಿ ಮಾಡುತ್ತಾರೆ. ಸ್ಥಾನಭ್ರಷ್ಟಗಳನ್ನಾಗಿ ಮಾಡುತ್ತವೆ. ॥ ೧೧ ॥

**ಭಾ॥ (೧) ಪದ್ಭ್ಯಾಂ ಭೂಮಿರಿತಿ ಶ್ರುತ್ಯಾ ಸುತಾ ವಿಷ್ಣೋರ್ವಸುಂಧರಾ। (೨) ತತ್ಜಾತ್ವಾತ್ಪರ್ವತಾ ವಿಷ್ಣೋರ್ನಪ್ತಾರಃ (೩) ಸೇಚನಾದ್ಧಿ ಮಿಟ್॥ ಹರಿ (೪) ಸ್ತಮಪಿ ಮೇರ್ವಾದಿಂ ಮಾರುತಶ್ಚ್ಯಾವಯಂತಿ ಹಿ॥ ಅಮೃಧ್ರಮಪ್ರಧೃಷ್ಯತ್ವಾತ್॥**

ಅ॥ (೧) ಪದ್ಭ್ಯಾಂ ಭೂಮಿರಜಾಯತ= ಪಾದಗಳಿಂದ ಭೂಮಿಯು ಹುಟ್ಟಿತು. ಎಂಬ ಶ್ರುತಿಯಿಂದ ಭೂದೇವಿಯು ಶ್ರೀವಿಷ್ಣುವಿನ ಪುತ್ರಿಯು, (೨) ಭೂದೇವಿಯಿಂದ ಹುಟ್ಟಿರುವುದರಿಂದ ಪರ್ವತಗಳು ಶ್ರೀವಿಷ್ಣು ವಿಗೆ ನಪ್ತೃಗಳ (ಪುತ್ರೀಪುತ್ರಗಳು.) (೩)ಶ್ರೀಹರಿಯು ಅಭೀಷ್ಟವನ್ನು ಸೇಚಿಸುವುದರಿಂದ ಮಿಟ್ ಎನಿಸುತ್ತಾನೆ,

(೪) ಸಹಿಸಲಶಕ್ಯವಾದುದರಿಂದ ಅಮ್ಯಧ್ರಂ ಎನಿಸಿಕೊಂಡ ಆ ಮೇರುಪರ್ವತ ಮೊದಲಾದುದನ್ನು ಮರುತ್ ಗಳು ಸ್ಥಾನಭ್ರಷ್ಟವನ್ನಾಗಿ ಮಾಡುತ್ತವೆ. ॥ ೧೧ ॥

ಋ॥ (೪೫೩) ಮರುತೋ ಯದ್ಧ ವೋ ಬಲಂ ಜನಾಁ ಅಚುಚ್ಯವೀತನ।
ಗಿರೀಁರಚುಚ್ಯವೀತನ ॥ ೧೨ ॥

ಅ॥ ಮರುತಃ= ಎಲೈ ಮರುತ್‌ಗಳೇ ಯತ್= ಯಾವ ಕಾರಣದಿಂದ, ವಃ= ನಿಮಗೆ, ಬಲಂ= ಸಂಪೂರ್ಣ ಬಲವಿದೆಯೋ, (ಆ ಕಾರಣದಿಂದ) (ನೀವು) ಜನಾನ್= ಜನರನ್ನು, ಅಚುಚ್ಯವೀತನ= (ಚ್ಯುತ ಗತಾ) ಗಿರೀನ್= ಅಚುಚ್ಯವೀತನ= ಪರ್ವತಗಳನ್ನೂ ಕೂಡ ತಮ್ಮ ಸ್ಥಾನಕ್ಕಿಂತ ಚ್ಯುತಗಳನ್ನಾಗಿ ಮಾಡಿರುವಿರಿ. (ಜನರನ್ನೂ ಪರ್ವತಗಳನ್ನೂ ಕೂಡ ತಂತಮ್ಮ ಸ್ಥಾನಕ್ಕಿಂತ ತಪ್ಪಿಸಲಿಕ್ಕೆ ಶಕ್ತರಾಗಿರುತ್ತೀರಿ. (ಚೆನ್ನಾಗಿ ಶಕ್ತಿಯಿದೆ ಎಂದು ತೋರಿಸುವುದಕ್ಕಾಗಿ ೨ ಸಲ ಕ್ರಿಯೆಯನ್ನು ಹೇಳಿದ್ದು.) ॥ ೧೨ ॥

ಭಾ॥ (೧) ಬಲಂ ಯದಪಿ ವೋಽಖಿಲಂ। (೨) ಜನಾಂಶ್ಚ್ಯಾವಯಿತಾಂ ಸ್ಥಾನಾಚ್ಛಕ್ತಾಃ ಸಮ್ಯ ಗ್ಗಿರೀನಪಿ ॥ ೧೨ ॥

ಅ॥ (೧) ಯಾವ ಕಾರಣದಿಂದ ನಿಮಗೆ ಸಮಸ್ತಬಲವೂ ಇದೆಯೋ, (೨) ಆದಕಾರಣ ನೀವು ಜನರನ್ನೂ ಪರ್ವತಗಳನ್ನೂ ತಂತಮ್ಮ ಸ್ಥಾನಕ್ಕಿಂತ ಚ್ಯುತಗಳನ್ನಾಗಿ ಮಾಡುವಿರಿ.

ವಿ ॥ (ಪರ್ವತಾದಿಗಳು ತಂತಮ್ಮ ಸ್ಥಾನಗಳಲ್ಲಿಯೇ ಇರುವುದರಿಂದ ತಪ್ಪಿಸುವಿರಿ ಎನ್ನುವುದು ಪ್ರಮಾಣ ವಿರುದ್ಧವೆಂದರೆ ಪರ್ವತಾದಿಗಳನ್ನು ತಮ್ಮ ಸ್ಥಾನಕ್ಕಿಂತ ತಪ್ಪಿಸಲಿಕ್ಕೆ ಶಕ್ತರಾಗುತ್ತೀರಿ, ಎಂದು ತಾತ್ಪರ್ಯವು. (2) ಚೆನ್ನಾಗಿ ಅಂತಹ ಸಾಮರ್ಥ್ಯವಿದೆ ಎಂದು ತೋರಿಸುವುದಕ್ಕಾಗಿ ಅಚುಚ್ಯವೀತನ ಎಂದು ೨ ಸಲ ಕ್ರಿಯೆಯನ್ನು ಹೇಳಿದ್ದು ॥ ೧೨ ॥

ಋ ॥ (೪೫೪) ಯದ್ಧ ಯಾಂತಿ ಮರುತಃ ಸಂ ಹ ಬ್ರುವತೇಽಧ್ವನ್ನಾ।
ಶೃಣೋತಿ ಕಶ್ಚಿದೇಷಾಂ ॥ ॥ ೧೩ ॥

ಅ ॥ ಮರುತಃ=ಮರುತ್‌ಗಳು, ಯತ್= ಯಾವಾಗ, ಯಾಂತಿ= ಹೋಗುತ್ತಾರೋ, (ಆಗ) ಏಷಾಂ = ಈ ಮರುತ್‌ಗಳ ಮಧ್ಯದಲ್ಲಿ, ಕೆಶ್ಚಿತ್= ಕೆಲವರು, ಅಧ್ವನ್= ಮಾರ್ಗದಲ್ಲಿ, ಸಮ್ ಬ್ರುವತೇ= ಶಾಸ್ತ್ರವಿಷಯಕ ಸಂವಾದವನ್ನು ಮಾಡುತ್ತಾರೆ. ಪ್ರಸಿದ್ಧ ಕಶ್ಚಿತ್=ಕೆಲವರು, ಆ=ಚೆನ್ನಾಗಿ, ಶೃಣೋತಿ ಹ= ಕೇಳುತ್ತಿರುತ್ತಾರೆ. (ಸರ್ವದಾ ಶಾಸ್ತ್ರಾಭ್ಯಾಸಗಳಲ್ಲಿಯೇ ಆಸಕ್ತರಾಗಿರುತ್ತಾರೆ.) ॥ ೧೩ ॥

ಭಾ ॥ ಕುರ್ವಂತಿ ಶಾಸ್ತ್ರಸಂವಾದಂ ಮಾರ್ಗೇ ಶೃಣ್ವಂತಿ ಕೇಚನ। ತೇಷಾಂ ಮಧ್ಯೇ ಹಿ ಮರುತಾಂ ॥ ೧೩ ॥

ಅ ॥ ಆ ಮರುತ್ತುಗಳ ಮಧ್ಯದಲ್ಲಿ ಕೆಲವರು ಮಾರ್ಗದಲ್ಲಿ ಶಾಸ್ತ್ರ ವಿಷಯಕ ಸಂವಾದವನ್ನು ಮಾಡುತ್ತಿದ್ದಾರೆ ಕೆಲವರು ಸರ್ವದಾ ಶಾಸ್ತ್ರಾಭ್ಯಾಸಗಳಲ್ಲಿಯೇ ಆಸಕ್ತರಾಗಿರುತ್ತಾರೆ- ॥ ೧೩ ॥

ಋ ॥ (೪೫೫) ಪ್ರಯಾ॑ತ ಶೀಭಮಾ॒ಶುಭಿಃ॒ ಸಂತಿ॒ ಕಣ್ವೇ॑ಷು ವೋ॒ ದುವಃ॑ । ತತ್ರೋ॒ ಷು ಮಾ॑ದಯಾಧ್ವೈ ॥ ೧೪ ॥

ಅ ॥ (ಎಲೋ ಮರುತ್ತುಗಳೇ ನೀವು) ಆಶುಭಿಃ= (ಆಶುಭಿರಶ್ವೈಃ ಎಂದು ಅಶ್ವನಾಮಗಳಲ್ಲಿ ಪಠಿತವಾಗಿದೆ.) ವಾಹನಗಳಿಂದ, ಶೀಭಂ=ಶೀಘ್ರದಲ್ಲಿ, ನಃ=ನಮ್ಮನ್ನು ಕುರಿತು, ಪ್ರಯಾತ=ಬನ್ನಿರಿ. (ಬಂದು) ತತ್ರೋ=ಅಲ್ಲಿಯೇ, (ನಮ್ಮ ಮನೆಗಳಲ್ಲಿಯೇ) ಸು=ಚೆನ್ನಾಗಿ ಮಾದಯಾಧ್ವೈ=ಮದವನ್ನು ಹೊಂದಿರಿ.(ಸುಖಿಗಳಾಗಿರಿ.) (ಹೇಗೆಂದರೆ) ಕಣ್ವೇಷು=ಋಷ್ಯಗೃಹಗಳಲ್ಲಿ, ವಃ=ನಿಮಗಾಗಿ, ದುವಃ=ದೋಹನಗಳು, ಸಂತಿ ಹಿ= ಇರುತ್ತವೆಯಷ್ಟೆ. ॥ ೧೪ ॥

ಭಾ ॥ (೧) ಶೀಭಂ ಕ್ಷಿಪ್ರಂ ಪ್ರಯಾತ ನಃ । (೨) ಮದಂ ಕುರುತ ತತ್ರೈವ ದೋಹ ನಾನ್ಯತ್ರ ಸಂತಿ ಹಿ ॥ ೧೪ ॥

ಅ ॥ (೧) ಶೀಭಂ=(ಶೀಘ್ರಂಶೀಭಂ ಶೀಭಂ ಎಂದು ಕ್ಷಿಪ್ರನಾಮಗಳಲ್ಲಿ ಪಠಿತವಾಗಿದೆ.) ಶೀಘ್ರವಾಗಿ ನಮ್ಮನ್ನು ಕುರಿತು ಬನ್ನಿರಿ. (೨) ಬಂದು ನಮ್ಮ ಗೃಹಗಳಲ್ಲಿಯೇ ಸುಖಿಗಳಾಗಿ ಆಗಿರುವಿರಿ, ಕಣ್ವಗೃಹಗಳಲ್ಲಿಯೇ ನಿಮಗಾಗಿ(ದೋಹ ಪ್ರಯೋಜಕ)ದೋಹನಗಳು (ಸುಖ ಸಾಧನಗಳು) ಸಮೃದ್ಧಗಳಾಗಿವೆ. ಪ್ರಸಿದ್ಧ ॥ ೧೪ ॥

ಋ ॥ (೪೫೬) ಅಸ್ತಿ॒ ಹಿ ಷ್ಮಾ॒ ಮದಾ॑ಯ ವಃ॒ ಸ್ಮಸಿ॑ ಷ್ಮಾ ವ॒ಯಮೇ॑ಷಾಂ । ವಿಶ್ವಂ॒ ಚಿದಾಯು॑ರ್ಜೀ॒ವಸೇ॑ ॥ ೧೫ ॥ ೧೪ ॥ ೩೭ ॥

ಅ ॥ (ಎಲೋ ಮರುತ್ತುಗಳೇ) ವಃ= ನಿಮಗೆ. ಮದಾಯ= ಸುಖಕ್ಕಾಗಿ, ಅಸ್ತಿ= ನಮ್ಮ ಗೃಹಗಳಲ್ಲಿ ಹವಿಸ್ಸು ಮೊದಲಾದ ಸಾಧನವಿದೆ. ಹಿ ಸ್ಮ= ಇದು ಸುಪ್ರಸಿದ್ಧವು. ಮತ್ತು. ವಯಂ= ನಾವು, ಏಷಾಂ= ಈ ಮರುತ್ತುಗಳ ಸಂಬಂಧಿಗಳು, ಸ್ಮಸಿ ಸ್ಮ= ಆಗಿರುವೆವು. (ಹೇಗೆಂದರೆ; ನಃ= ನಮಗೆ, (ಮರುತ್ತುಗಳ ಅನುಗ್ರಹದಿಂದ) ಜೀವಸೇ= ಜೀವನಕ್ಕಾಗಿ, ವಿಶ್ವಂ ಚಿತ್= ಸಂಪೂರ್ಣವಾದ ಆಯುಸ್ಸೂ, ಅಸ್ತಿ ಹಿ= ಇದೆ. (ಆ ಮರುತ್ತುಗಳ ಪ್ರಸಾದದಿಂದ ಆಯುಷ್ಯ ಅನ್ನಾದಿಗಳನ್ನು ಹೊಂದಿರುವ ನಾವು ಮರುತ್ತುಗಳ ಸಂಬಂಧಿಗಳು ಹೇಗೆತಾನೇ ಆಗದೆ ಹೋದೇವು? ಆದ ಕಾರಣ ನಮ್ಮನ್ನು ಕುರಿತು ಬನ್ನಿರಿ. ॥ ೧೫ ॥ ೧೪ ॥ ೩೭ ॥

ಭಾ ॥ ಸರ್ವಮಾಯುರ್ಜೀವಸೇಽಸ್ತಿ ಪ್ರಸಾದಾನ್ಮರುತಾಂ ಹಿ ನಃ ॥ ೧೫ ॥ ೧೪ ॥ ೫ ॥

ಅ ॥ (ಇಲ್ಲಿ ಉತ್ತರಾರ್ಧವು ಅಪೂರ್ಣವಾಗಿರುವುದರಿಂದ ಅದನ್ನು ಪ್ರಸಾದಾನ್ಮರುತಾಂಹಿನಃ ಎಂದು ಪೂರ್ತಿಗೊಳಿಸಿಕೊಂಡು ವ್ಯಾಖ್ಯಾನ ಮಾಡುತ್ತಾರೆ.) (ಎಲೋ ಮರುತ್ತುಗಳೇ, ನಿಮ್ಮ ಸುಖಕ್ಕಾಗಿ ನಮ್ಮ

ಮನೆಗಳಲ್ಲಿ ಹವಿರಾದಿ ಸಾಧನಗಳಿವೆ. ನಾವು ಮರುತ್‌ಗಳ ಸಂಬಂಧಿಗಳಾಗಿರುವೆವು. ಹೇಗೆಂದರೆ) ನಮಗೆ ಮರುತ್‌ಗಳ ಅನುಗ್ರಹದೆಸೆಯಿಂದ ಜೀವನಕ್ಕಾಗಿ ಸಂಪೂರ್ಣವಾದ ಆಯುಷ್ಯವೂ ಇದೆಯಷ್ಟೆ. (ಆದಕಾರಣ ಆ ಮರುತ್‌ಗಳ ಅನುಗ್ರಹದಿಂದಲೇ ದೀರ್ಘಾಯುಷ್ಯ ಅನ್ನ ಮೊದಲಾದವುಗಳನ್ನು ನಾವು ಹೊಂದಿರುತ್ತೇವೆ. ಆದಕಾರಣ ಮರುತ್‌ಗಳ ಸಂಬಂಧಿಗಳು ನಾವು ಹೇಗೆ ತಾನೆ ಆಗದೆ ಹೋದೇವು. ಆದಕಾರಣ ನಮ್ಮನ್ನು ಹೊಂದಿರಿ ) ॥ ೧೫ ॥ ೧೪ ॥ ೫ ॥

ಅವ॥ ಕದ್ಧ ಇತ್ಯಾದಿಗಳು ೧೫ ಋಕ್ಕುಗಳುಳ್ಳದ್ದು ೩ ವರ್ಗಗಳು. ಮರುದ್ದೇವತಾಕವು. ಗಾಯತ್ರೀ ಛಂದಸ್ಕವು. ೩೮ನೇ ಸೂಕ್ತವು

ಋ ॥ (೪೫೭) ಕದ್ಧ ನೂನಂ ಕಧಪ್ರಿಯಃ ಪಿತಾ ಪುತ್ರಂ ನ ಹಸ್ತಯೋಃ।
ದಧಿಧ್ವೇ ವೃಕ್ತಬರ್ಹಿಷಃ ॥ ೧ ॥

ಅ ॥ ಹೇ ವೃಕ್ತ ಬರ್ಹಿಷಃ= [ವೃಜೀ ವರ್ಜನೇ] [ವೃಕ್ತಂ ಬರ್ಹಿಃಯೇಃಷು ಎಂಬ ವಿಗ್ರಹದಿಂದ] ಯಾವ ವಿಷಯದಲ್ಲಿ ಬರ್ಹಿಸ್ಸು ವಿಸ್ತೃತವಾಗಿದೆಯೋ, ಅಂತಹ ವಿಸ್ತೃತ ಬರ್ಹಿಸ್ಸುಳ್ಳ, ಮರುತ್‌ಗಳಾದ ನೀವು, ಕತ್= ಯಾವಾಗ, ಹಸ್ತಯೋಃ= ಈ ಶರೀರ ಸಂಬಂಧಿಗಳಾದ ಹಸ್ತಗಳಲ್ಲಿ (ಜನ್ಮಾಂತರದಧನಾದಿಗಳಾದ ಹಸ್ತಗಳಲ್ಲಿ ಅಲ್ಲ)ನೂನಂ= ನಿಶ್ಚಯವಾಗಿಯೂ, ದಧಿಧ್ವೇ= ಧರಿಸುವಿರಿ, ಹ= ಆಸ್ವಾದನೆ. ಕಧ ಪ್ರಿಯಃ= ಸರ್ವದಾ ಪ್ರಿಯನಾದ, ಪಿತಾ= ತಂದೆಯು. ಪುತ್ರಂ ನ=ಪುತ್ರನನ್ನೆಂಬಂತೆ. (ಅಂದರೆ ಮಗನನ್ನು ಪ್ರಿಯನಾದ ತಂದೆಯಂತೆ ಧರಿಸುವಿರಿ) ॥ ೧ ॥

ಭಾ ॥ (೧) ಕದಾಃಇನಯೋರ್ಹಸ್ತಯೋರ್ದೇವಾದಧ್ವೇ ಪ್ರಿಯತಾತವತ್॥(೨)ಕದಾಪಿ ಯತ್ಪ್ರಿಯಸ್ತಾತಃ ಕಧಪ್ರಿಯ ಇತೀರಿತಃ ॥ (೩) ಸ್ತೃತಂ ಬರ್ಹಿರ್ಯರ್ದ್ವಿಷಯೇ ತೇ ಪ್ರೋಕ್ತಾ ವೃಕ್ತಬರ್ಹಿಷಃ ॥ ೧ ॥

ಅ॥ ಎಲೋ ಮರುತ್ ದೇವತೆಗಳಿರಾ ಮಗನನ್ನು ಪ್ರಿಯನಾದ ತಂದೆಯಂತೆ ಯಾವಾಗ ಈ ಶರೀರ ಸಂಬಂಧಿಗಳಾದ ಹಸ್ತಗಳಲ್ಲಿ ಧರಿಸುವಿರಿ. [೨] ಸರ್ವದಾ ತಂದೆಯು ಯಾವ ಮಗನಿಗೆ ಪ್ರಿಯನೇ ಆಗಿರುತ್ತಾನೋ, ಅಂತಹ ತಂದೆಯು ಕಧ ಪ್ರಿಯಃ ಎನಿಸುತ್ತಾನೆ. [೩] ಯಾವ ವಿಷಯದಲ್ಲಿ ಬರ್ಹಿಸ್ಸು ವಿಸ್ತೃತವಾಗಿದೆಯೋ, ಅಂತಹವರು ವಿಸ್ತೃತ ಬರ್ಹಿಸ್ಸುಳ್ಳವರು, ಎಂದು ಹೇಳಲ್ಪಟ್ಟಿರುತ್ತಾರೆ ॥ ೧ ॥

ಋ ॥ (೪೫೮) ಕ್ವ ನೂನಂ ಕದ್ವೋ ಅರ್ಥಂ ಗಂತಾ ದಿವೋ ನ ಪೃಥಿವ್ಯಾಃ।
ಕ್ವ ವೋ ಗಾವೋ ನ ರಣ್ಯಂತಿ ॥ ೨ ॥

ಅ ॥ (ಎಲೋ ಮರುತ್‌ಗಳೇ ನೀವು) ನೂನಂ= ಈಗ, ದಿವಃ= ಸ್ವರ್ಗಲೋಕದಿಂದಲೂ ಪೃಥಿವ್ಯಾಶ್ಚ= ಪೃಥಿವಿಯ ದೆಸೆಯಿಂದಲೂ, ಕ್ವಗಂತಾ= ಎಲ್ಲಿಗೆ ಹೋಗುವಿರಿ. (ಹೋದರೆ) ವಃ= ನಿಮಗೆ, ಕತ್ ಅರ್ಥಂ= ಏನು ಅರ್ಥವು? ಏನು ಪ್ರಯೋಜನವು? (ಎಲ್ಲಿಗೂ ಹೋಗದೇಇರಿ.) ಮತ್ತು, ವಃ=ನಿಮ್ಮನ್ನು, ಕ್ವ=ಎಲ್ಲಿಗೆ,

ರಣ್ಯಂತಿ=ಕರೆಯುತ್ತಾರೆ. (ಹೇಗೆಂದರೆ) ಗಾವಃ ನ=ಗೋವುಗಳಂತೆ. ಹೇಗೆ ಹಸಿ ಹುಲ್ಲನ್ನು ಇಚ್ಛಿಸುವ ಗೋವುಗಳು ಹಸಿ ಹುಲ್ಲನ್ನು ಕೊಡುವವರನ್ನು ಕರೆಯುತ್ತವೋ ಹಾಗೆಯೇ ಮೋಕ್ಷಾದಿ ಫಲವನ್ನು ಇಚ್ಛಿಸುತ್ತಾ ಸ್ತುತಿಸುವ ಸಾಧಕರು ನಿಮ್ಮನ್ನು ಎಲ್ಲಿಗೆ ಕರೆಯುತ್ತಾರೆ. (ಭಕ್ತರು ಯಜ್ಞಾದಿಗಳಲ್ಲಿ ನಿಮ್ಮನ್ನು ನಿಶ್ಚಯವಾಗಿಯೂ ಕರೆಯುತ್ತಾರೆ. ಆದ ಕಾರಣ ಎಲ್ಲಿಗೆ ಕರೆಯುತ್ತಾರೆ ಎಂದದ್ದು ಹೇಗೆ ಎಂದರೆ, ಭಕ್ತರು ನಿಮ್ಮನ್ನು ಕರೆಯುತ್ತಾರೆ ಎಂಬುವುದು ದುರ್ಲಭವು ಎಂದು ಭಾವವು.) ॥ ೨ ॥

ಭಾ ॥ (೧) ದಿವಃ ಪೃಥಿವ್ಯಾಶ್ಚೇದಾನೀಂ ಕ್ವ ಗಚ್ಛಥ ಚ ಕಿಂ ಫಲಂ। ನ ಗಚ್ಛಥ ಕ್ವಚಾಪ್ಯೇತ ಜ್ಜ್ಞಾತವ್ಯಂ ತತ್ಪ್ರಸಾದತಃ। (೨) ಆ ಹ್ವಯಂತಿ ಕ್ವ ವಾ ಗಾವೋ । ಯಥೈವ ಯವಸಾರ್ಥಿನಃ। ಫಲಾರ್ಥಿನಃ ಸ್ತುವಂತೋ ವಃ ಕ್ವಾಹ್ವಯಂತಿ ತಥೈವ ಚ ॥ ೨ ॥

ಅ ॥ (೧) ಎಲೋ ಮರುತ್ತುಗಳೇ ಈಗ ಸ್ವರ್ಗದಿಂದಲೂ, ಭೂಲೋಕದಿಂದಲೂ, ಎಲ್ಲಿಗೆ ಹೋಗುವಿರಿ, ಹೋದರೆ ನಿಮಗೆ ಏನು ಪ್ರಯೋಜನವು? ಎಲ್ಲಿಗೂ ಹೋಗಬೇಡಿರಿ ಅವರ ಅನುಗ್ರಹದಿಂದ ಇದನ್ನು ತಿಳಿಯಬೇಕು. (೨) ಹೇಗೆ ಬಾಲತೃಣವನ್ನು ಇಚ್ಛಿಸುವ ಗೋವುಗಳು ಬಾಲತೃಣವನ್ನು ಕೊಡುವವರನ್ನು ಕರೆಯುತ್ತವೋ, ಹಾಗೆಯೇ ಮೋಕ್ಷಾದಿ ಫಲಗಳನ್ನು ಇಚ್ಛಿಸುವ ಸ್ತುತಿಸುವ ಸಾಧಕರಾದ ಭಕ್ತರು ನಿಮ್ಮನ್ನು ಎಲ್ಲಿಗ ಕರೆಯುತ್ತಾರೆ. ॥ ೨ ॥

ಋ ॥ (೪೫೯) ಕ್ವ ವಃ ಸುಮ್ನಾ ನವ್ಯಾಂಸಿ ಮರುತಃ ಕ್ವ ಸುವಿತಾ । ಕ್ವೋ
ವಿಶ್ವಾನಿ ಸೌಭಗಾ ॥ ೩ ॥

ಅ ॥ ಹೇ ಮರುತಃ=ಎಲೋ ಮರುತ್ತುಗಳೇ ವಃ=ನಿಮ್ಮ ನವ್ಯಾಂಸಿ=(ಣು ಸ್ತುತೌ) ಸ್ತುತ್ಯಗಳಾದ, ಸುಮ್ನಾ=(ಸುಮ್ನಂ ಸ್ಯೋನಂ ಎಂದು ಸುಖ ನಾಮಗಳಲ್ಲಿ ಪಠಿತವಾಗಿದೆ.) ಸುಖಗಳು, ಕ್ವ=ಹೇಗೆ ಇರುವವುಗಳು. ಯಾವ ಉಪಾಯದಿಂದ ಜ್ಞೇಯಗಳು,. ಸುವಿತಾ=(ಷು ಪ್ರಸವೈಶ್ವರ್ಯಯೋಃ) ಒಳ್ಳೇ ಮಂಗಳಕರಗಳಾದ ಚರಿತಗಳು, ಕ್ವ=ಹೇಗೆ ಇರುವವುಗಳು. ಯಾವ ಉಪಾಯದಿಂದ ತಿಳಿಯಲರ್ಹಗಳು. ವಿಶ್ವಾನಿ=ಸಂಪೂರ್ಣಗಳಾದ, ಸೌಭಗಾ=ಸೌಭಾಗ್ಯಗಳು (ಯಾವ ಲಕ್ಷಣವಿದ್ದರೆ ಜನರು ಅಧೀನರು ಆಗುತ್ತಾರೋ ಅದು ಸೌಭಾಗ್ಯವೆನಿಸುತ್ತದೆ. ಅವುಗಳು.) ಕ್ವೋ=ಹೇಗೆ ತಾನೇ ಇರುವವುಗಳು. ಯಾವ ಉಪಾಯದಿಂದ ತಿಳಿಯಲರ್ಹಗಳು. ॥ ೩ ॥

ಭಾ ॥ (೧) ಸ್ತುತ್ಯಾನಿ ವಃ ಸುಖಾನಿ ಚ ಕಥಂ ಜ್ಞೇಯಾನಿ ನಃ ಸದಾ । ಇತ್ಯಭಿಪ್ರಾಯತಃ ಪ್ರಶ್ನಃ (೨) ಕಸ್ಮಿನ್ನೋ ಜ್ಞಾಪಕಸ್ತ್ವಿತಿ ॥ (೩) ಸುವಿತಾನಿ ಸುಭದ್ರಾಣಿ ಸೌಭಗಂ ಲಕ್ಷಣಂ ಪರಂ ॥ ೩ ॥

ಅ ॥ (೧) ನಿಮ್ಮ ಸ್ತುತ್ಯಗಳಾದ ಸುಖಗಳು ಹೇಗೆ ಇರುವವುಗಳು. ಯಾವ ಉಪಾಯದಿಂದ ನಮಗೆ ತಿಳಿಯಲರ್ಹಗಳು ಈ ಅಭಿಪ್ರಾಯದಿಂದ ಪ್ರಶ್ನೆಯು ಸಮರ್ಥಿತವಾಗಿದೆ. (೨) ನಿಮಗೆ ಸುಖ ಮೊದಲಾದ ಧರ್ಮಗಳು ಯಾವ ಆಚಾರ್ಯರು ಸಮಾಪ್ತರಾಗುತ್ತಿರಲು (ಪರೋಪದೇಶಕರಾಗುತ್ತಿರಲು) ನಮಗೆ ಸ್ಪಷ್ಟ

ತೋರುವವನ್ನು ತಿಳಿಸಿಕೊಡುವುವು? ಸುಖಾದಿಗಳು ಬಹಳವಿದ್ದ ಪ್ರಯುಕ್ತ ಜ್ಞಾಪಕಃ ಎಂದು ಏಕವಚನವು ಹೇಗೆ ಎಂದರೆ ಭಗವಂತನು ಒಬ್ಬನೇ. ಆ ಭಗವದ್ರೂಪಗಳೇ ಆದ ಸುಖ ಜಿಂತೆ ಸೌಭಾಗ್ಯಗಳೂ ಒಂದೇ ಎಂಬ ವಿವಕ್ಷೆಯಿಂದ ಜ್ಞಾಪಕಃ ಎಂದು ಏಕ ವಚನವು ಯುಕ್ತವೇ) (ಮರುತ್‌ಗಳಲ್ಲಿ ಆದರೂ ಮರುತ್‌ಗಳು ಬಹುಮಂದಿಯಾಗಿರುವುದರಿಂದ ನಿಮ್ಮ ಸುಖಾದಿ ಧರ್ಮಗಳು ಯಾವ ಆಚಾರ್ಯರು ತತ್ತ್ವೋಪದೇಶಕರಾಗುತ್ತಿರಲು ನಮಗೆ ಜ್ಞಾಪಕರಾಗುತ್ತಾರೆ, ಎಂದು ಬಹುವಚನವನ್ನು ತಿಳಿದುಕೊಳ್ಳಬೇಕು.) (೩) (ಸುಭಿತ ಸೌಭಗ ಶಬ್ದಾರ್ಥವನ್ನು ಹೇಳುತ್ತಾರೆ.) ಸುಭಿತಾಃ=ಒಳ್ಳೆ ಮಂಗಳಕರಗಳು. ಷಣ್ಣವತ್ಯಂಗುಲೋಯಸ್ತು ನ್ಯಗ್ರೋಧ ಪರಿಮಂಡಲಃ । ಸಪ್ತಪಾದಶ್ಚತುರ್ಹಸ್ತಃ ಇತ್ಯಾದಿ ಪ್ರಕಾರ ಹೇಳಿದ ಆ ಲಕ್ಷಣಗಳಲ್ಲಿ ಸೌಭಾಗ್ಯವೆಂಬುವುದು ಒಂದು ಲಕ್ಷಣವು. ಯಾವುದಿದ್ದರೆ ಜನರು ಅಧೀನರು ಆಗುತ್ತಾರೋ, ಅದು ಸೌಭಾಗ್ಯವೆನ್ನಿಸುತ್ತದೆ. ॥ ೨ ॥

ಖು ॥ (೪೭೦) ಯದ್ಯೂಯಂ ಪೃಶ್ನಿಮಾತರೋ ಮರ್ತಾಸಃ ಸ್ಯಾತನ ।

ಸ್ತೋತಾ ವೋ ಅಮೃತಃ ಸ್ಯಾತ್ ॥ ೩ ॥

ಅ ॥ ಹೇ ಪೃಶ್ನಿಮಾತರಃ= (ಪೃಶ್ನಿರ್ಮಾತಾ ಯೇಷಾಂ ಎಂಬ ವ್ಯುತ್ಪತ್ತಿಯಿಂದ) ಭಾರತಿಯೇ ತಾಯಿಯಾಗಿಉಳ್ಳ ಮರುತ್‌ಗಳೇ,ಅಥವಾ ಪೃಶ್ನಯೋಗ್ಯತ್ವಾತ್=ಪ್ರಶ್ನೆಗೆ ಯೋಗ್ಯವಾಗಿರುವುದರಿಂದ ಪೃಶ್ನಿಃ= ವೇದ ೨), ಮಾತಾ=(ಜ್ಞಾತಾ ಯಸ್ಯ ಎಂಬವ್ಯುತ್ಪತ್ತಿಯಿಂ) ವೇದೈಕಸಮಧಿಗಮ್ಯನಾದ ಶ್ರೀಹರಿಯು ಅಥವಾ ವೇದಾರ್ಥವನ್ನು ಚೆನ್ನಾಗಿ ತಿಳಿದಿರುವವನು, ಇಂತಹ ವಿಷ್ಣುರೂಪ ವಿಶೇಷಗಳೇ ಯೂಯಂ =ನೀವು, ಯತ್=ಯಾವ ಪಕ್ಷದಲ್ಲಿ, ಮರ್ತಾಸಃ =ಮನುಷ್ಯರು, ಸ್ಯಾತನ= (ಅಸಭುವಿ) ಆಗುವಿರೋ) ಆದಾಗ್ಯೂ ವಃ= ನಿಮ್ಮನ್ನು, ಸ್ತೋತಾ =ಸ್ತುತಿಸುವವನು, ಅಮೃತಃ= ದೇವನು, ಸ್ಯಾತ್ ಆಗುವನು. (ಎಂದರೆ ಮನುಷ್ಯಾವತಾರದಲ್ಲಿಯೂ ನೀವು ಭಕ್ತರಿಗೆ ದೇವತ್ವಾದಿಗಳನ್ನು ಕೊಡಲಿಕ್ಕೆ ಸಮರ್ಥರೇ ಆಗುವಿರಿ. ॥ ೪ ॥

ಭಾ ॥ (೧) ಪೃಶ್ನಿರ್ವೇದಃ ಪ್ರಶ್ನಯೋಗ್ಯಃ ಪೃಶ್ನಿಮಾತಾ ಹರಿಸ್ತತಃ । ಜ್ಞೇಯಸ್ಯಸ್ಯಾಪಿ ವಿಜ್ಞಾತಾ (೨) ಮರುತಶ್ಚೇತ್ ಸುತಾ ಗಿರಃ॥ (೩) ಮಾನುಷಾ ಯದಿ ಯೂಯಂ ವಃ ಸ್ತೋತಾ ದೇವೋ ಭವೇದಪಿ ॥ ೪ ॥

ಅ ॥ (ಪೃಶ್ನಿಮಾತೃ ಶಬ್ದವನ್ನು ಶ್ರೀಹರಿಯಲ್ಲಿ ವ್ಯಾಖ್ಯಾನ ಮಾಡುತ್ತಾರೆ.) ಪ್ರಶ್ನಕ್ಕೆ ಯೋಗ್ಯವಾಗಿರುವುದರಿಂದ ಪೃಶ್ನಿಃ=ವೇದವು. ವೇದದಿಂದ ಜ್ಞೇಯನಾದುದರಿಂದ ಪೃಶ್ನಿಮಾತಾ=ಶ್ರೀಹರಿಯು. ಅಥವಾ ವೇದವನ್ನು ಚೆನ್ನಾಗಿ ತಿಳಿಯುವವನು ಶ್ರೀಹರಿಯು. (೨) ಮರುತ್‌ಗಳು ವಿವಕ್ಷಿತರಾದರೆ ಆಗ ಪೃಶ್ನಿಮಾತರಃ ಎನ್ನುವುದಕ್ಕೆ ಭಾರತಿಯು ಮಕ್ಕಳು ಎಂದರ್ಥವು. (ಪೃಶ್ನಿರ್ಗೀರ್ಭಾರತೀ ಎಂದು ನಾಮಗಳಲ್ಲಿ ಪಠಿತವಾಗಿದೆ.)(೩)(ಈಗ ಈ ಋಕ್ಕನ್ನು ವ್ಯಾಖ್ಯಾನ ಮಾಡುತ್ತಾರೆ)ಎಲೋ ಮರುತ್‌ಗಳೇ ನೀವು ಯಾವ ಪಕ್ಷದಲ್ಲಿ ಮನುಷ್ಯರು ಆಗಿರುವಿರೋ, ಆಗಲೂ ನಿಮ್ಮನ್ನು ಸ್ತುತಿಸುವವನು ದೇವನು ಆಗುವನು. (ಅಂದರೆ ಮನುಷ್ಯಾವತಾರದಲ್ಲಿಯೂ ಭಕ್ತರಿಗೆ ದೇವತ್ವಾದಿಗಳನ್ನು ಕೊಡಲಿಕ್ಕೆ ಸಮರ್ಥರೇ ಆಗಿರುವಿರಿ) ॥ ೪ ॥

ಋ॥ (೪೭೧) ಮಾ ವೋ ಮೃಗೋ ನ ಯವಸೇ ಜರಿತಾ ಭೂದಜೋಷ್ಯಃ।

ಪಥಾ ಯಮಸ್ಯ ಗಾದುಪ ॥ ೫ ॥ ೧೫ ॥

ಅ॥ (ಮರುತ್‍ಗಳೇ) ವಃ=ನಿಮ್ಮನ್ನು, ಜರಿತಾ=ಸ್ತುತಿಸುವವನು,(ಪ್ರಾಯಸ್ಸತಾಂ ನ ಮನಃ ಪಾಪ ಪಾಗೇ ಗಚ್ಛೇತ್, ಎಂದು ಹೇಳಿದ ಪ್ರಕಾರ ಕಥಂಚಿತ್ ಪಾಪವಮಾಡಿದವನಾದಾಗ್ಯೂ ಈ ಜನ್ಮದಲ್ಲಿ) ಯವಸೇ=ಗೋವುಗಳಿಂದ ಹೊಂದಲು ಯೋಗ್ಯವಾದ ಬಾಲತೃಣದಾನ ಸಮಯದಲ್ಲಿ ವ್ಯಗೋನ ಜೋಷ್ಯಃ= ವ್ಯಾಘ್ರಾದಿ ಮೃಗಗಳು ಹೇಗೆ ಸೇವಿಸಲು ಅರ್ಹಗಳು ಅಲ್ಲವೋ, ಹಾಗೆಯೇ ಅಜೋಷ್ಯಃ=(ಜುಷಿಃಪ್ರೀತಿಸೇವ ನಯೋಃ ಸೇವಿಸಲರ್ಹನು ಮಾಭೂತ್=ಆಗ ಬಾರದು. ಪಾತನಾಡಿಸಿ ಕೊಳ್ಳಲನರ್ಹನು ಮಾಭೂತ್=ಆಗ ಬಾರದು (ಇಲ್ಲಿ ಮಾತನಾಡಿಸಿಕೊಳ್ಳಲು ಅನರ್ಹನು ಆಗುವದಿಲ್ಲವೆಂದು ಇಷ್ಟು ಮಾತ್ರವಲ್ಲ.ಮತ್ತೆ ಪರಲೋಕ ದಲ್ಲಿ) ಯಮಸ್ಯ ಪಥಾ ಮಾ ಉಪಗಾತ್= ಯಮಮಾರ್ಗವನ್ನು ಹೊಂದಬಾರದು ॥೫॥೧೫॥

ಭಾ ॥ (೧) ನ ಸ್ಯಾದಸೇವ್ಯಃ ಸ್ತೋತಾಽತ್ರ ಯಥಾ ಯವಸಗೋಚರೇ । ಗೋಪ್ರಾಪ್ಯೇ ತು ವ್ಯಗೋ ಸೇವ್ಯೋ (೨) ಯಮಮಾರ್ಗಂ ನ ಚ ವ್ರಜೇತ್॥ (೩) ಯಾಚ್ಞಾ ಽಽಇ ವಿಶೇಷೋಽಯಂ ನಿಂದಾಸ್ತುತ್ಯೇಕದೇಶಯುಕ್ ॥೫॥೧೫॥

ಅ ॥ [೧] ನಿಮ್ಮನ್ನು ಸ್ತುತಿಸುವವನು ಕಥಂಚಿತ್ ಪಾಪವನ್ನು ಮಾಡಿದವನಾದಾಗ್ಯೂ ಈ ಜನ್ಮದಲ್ಲಿ ಸೇವಿಸಿಕೊಳ್ಳಲನರ್ಹನು ಆಗಲಾರನು. [ವ್ಯತಿರೇಕ ದೃಷ್ಟಾಂತವೆಂಬ ಅಭಿಪ್ರಾಯದಿಂದ ವ್ಯಾಖ್ಯಾನ ಮಾಡುತ್ತಾರೆ.] ಹೇಗೆ ಪಂಚ ಮಹಾಯಜ್ಞ ಮಧ್ಯದಲ್ಲಿ ಗೋವುಗಳಿಂದ ಪ್ರಾಪ್ಯವಾದ ಗೋಗ್ರಾಸ ದಾನ ಸಮಯದಲ್ಲಿ ಹಸಿಹುಲ್ಲು ಮೊದಲಾದುದನ್ನು ಕೊಡುವ ಸಮಯದಲ್ಲಿ ವ್ಯಾಘ್ರ ಮೊದಲಾದ ಪ್ರಾಣಿವು ಸೇವಿ ಸಲರ್ಹವು ಆಗುವುದಿಲ್ಲವೋ (ಹಾಗೆ ಈ ಸ್ತುತಿಸುವವನು ಪೂಜಾದಿಗಳಲ್ಲಿ ಅಸೇವ್ಯನು ಆಗುವುದೇ ಇಲ್ಲ) (೨) (ಈಜನ್ಮದಲ್ಲಿ ಮಾತನಾಡಿಸಿಕೊಳ್ಳಲಿಕ್ಕೆ ಅನರ್ಹನು ಆಗುವುದಿಲ್ಲವೆಂಬಿಷ್ಟು ಮಾತ್ರವಲ್ಲ. ಮತ್ತೆ) ಯಮ ಮಾರ್ಗವನ್ನು ಹೊಂದುವುದಿಲ್ಲ. (೩) (ಹಾಗಾದರೆ ಸೇವಿಸಿಕೊಳ್ಳಲು ಯೋಗ್ಯವಾದ ಒಂದು ವಸ್ತುವನ್ನು ದೃಷ್ಟಾಂತ ಹೇಳಬೇಕಿತ್ತು. ವ್ಯತಿರೇಕ ಮುಖದಿಂದ ಅಸೇವ್ಯಗಳಾದ ವ್ಯಾಘ್ರಾದಿಗಳನ್ನು ದೃಷ್ಟಾಂತವಾಗಿ ಹೇಳಿದ್ದು ಹೇಗೆ ಕೂಡುತ್ತದೆ, ಎಂದರೆ) ಆದಕಾರಣ ನಿಮ್ಮನ್ನು ಸ್ತೋತ್ರಗಳನ್ನಾಗಿ ಮಾಡಿರಿ, ಎಂದು ಪ್ರಾ ರ್ಥನೆಯಲ್ಲಿ ತಾತ್ಪರ್ಯವು. ಇದು ಯಾಚ್ಞಾರೀತಿ ವಿಶೇಷವು, ಪರರ ನಿಂದೆಯನ್ನು ವ್ಯಸನಿಯಾಗಿ ಮಾಡುವು ದಿಲ್ಲ. ಮತ್ತೆ ಪ್ರಕೃತ ಗೋವಿನ ಸ್ತುತಿಗಾಗಿ, ಹೀಗೆ ಸ್ತುತಿಯು ಪರನಿಂದೆಯ ಏಕದೇಶವು ಅಂದರೆ ವ್ಯಾ ಘ್ರಾದಿಗಳ ನಿಂದೆಯಿಂದ ಸ್ತುತಿಸುವ ಪುರುಷನನ್ನು ಪ್ರಶಂಸಿದ ಹಾಗೆ ಆಯ್ತು; (ಆದಕಾರಣ ಹೇಳಿದ್ದು ಯುಕ್ತವು) ॥೫॥೧೫॥

ಋ ॥ (೪೬೨) ಮೋ ಷು ಣಃ ಪರಾಪರಾ ನಿರ್ಋತಿ ರ್ದುರ್ಹಣಾ ವಧೀತ । ಪದೀಷ್ಟ ತೃಷ್ಣಯಾ ಸಹ ॥೬॥

ಅ ॥ (ಎಲೋ ಮರುತ್‍ಗಳೇ.) ನಿಮ್ಮ ಅನುಗ್ರಹದಿಂದ) ದುರ್ಹಣಾ=ದುಃಖವನ್ನು ಹೊಂದಿಸಿಕೊ ಡುವುದು ಸಂಹರಿಸುವುದು. ಆದಕಾರಣ ದುರ್ಹಣಾ ಎನಿಸಿಕೊಂಡ, ನಿರ್ಋತಿಃ=ನಿರ್ಋತಿಯೆಂದು ಹೆಸರುಳ್ಳ ದೇವತೆಯು, (ಮೃತ್ಯುದೇವತೆಯು) ನಃ=ನಮ್ಮನ್ನು, ಪರಾಪರಾ=ಮುಂದಿನ ಕಾಲದಲ್ಲಿ, ಆದಕ್ಕಿಂತ ಮುಂದಿನ ಕಾಲದಲ್ಲಿ ಸು=ಎಲ್ಲಿಯೂ, ಮೋ ವಧೀತ್=ಸರ್ವಥಾ ಕೊಲ್ಲಲೇಬಾರದು. (ಆ ನಿರ್ಋತಿಯು) ತೃಷ್ಣಯಾ ಸಹ=ಆಶೆಯಿಂದ ಕೂಡಿಕೊಂಡೇ, ಪದೀಷ್ಟ=(ಪದ ಗತೌ)ಹೋಗಲಿ-(ಎಲ್ಲಿಗೆ ಬೇಕೋ ಅಲ್ಲಿಗೆ ಹೋಗಲಿ)॥೬॥

ಭಾ ॥ ಮಾ ವಧೀನ್ನಃ ಕ್ಷುಧಿನ್ಮೃತ್ಯುಃ ಪರತಃ ಪರತೋಽಪಿ ಚ । ದುರ್ಹಣಾ ದುಃಖದಾ ಹಂತ್ರೀ ಯಾತು ಸಾ ತೃಷ್ಣಯಾ ಸಹ ॥ ೬ ॥

ಅ ॥ ದುರ್ಹಣಾ=ದುಃಖವನ್ನು ಕೊಡುವವಳು ಸಂಹರಿಸುವವಳು. ಇಂತಹ ಯಾಪ ಮೃತ್ಯು ದೇವತೆಯು ಪರಕಾಲದಲ್ಲಿಯೂ ಆದಕ್ಕಿಂತಲೂ ಮೇಲಿನ ಕಾಲದಲ್ಲಿಯೂ ಎಲ್ಲಿಯೂ ನಮ್ಮನ್ನು ಕೊಲ್ಲದಿರಲಿ. ಆ ಮೃತ್ಯುದೇವತೆಯು ಅಭಿಲಾಷೆಯಿಂದ ಕೂಡಿ ಎಲ್ಲಿಗಾದರೂ ಹೋಗಲಿ ॥ ೬ ॥

ಋ ॥ (೪೬೩) ಸತ್ಯಂ ತ್ವೇಷಾ ಅಮವಂತೋ ಧನ್ವಞ್ಚಿದಾ ರುದ್ರಿಯಾಸಃ।
ಮಿಹಂ ಕೃಣ್ವಂತ್ಯವಾತಾಂ ॥ ೭ ॥

ಅ ॥ ತ್ವೇಷಾಃ=(ತ್ವಿಷದೀಪ್ತೌ) ದೀಪ್ತಿ (ಪ್ರಕಾಶ) ವುಳ್ಳ; ಅಮವಂತಃ=(ಮಾ ಪ್ರಮಾ ಪರಿಚ್ಛೇದಃ ತದ್ವಂತಃ) ಪರಿಚ್ಛೇದ ಇಲ್ಲದಿರುವ, ಅಥವಾ (ನ ವಿದ್ಯತೇ ಮಾ ಯಸ್ಯ ಸಾಮರ್ಥ್ಯಸ್ಯ ತದಮಂ, ತದ್ವಂತಃ) ಅಪ್ರಮೇಯರಾದ, ಅಪರಿಮಿತ ಸಾಮರ್ಥ್ಯವುಳ್ಳ, ರುದ್ರಿಯಾಸಃ=(ದ್ರುಗತೌ ರುಜಃ ವಿದ್ರಾವಕಃ, ರುದ್ರಃ= ರೋಗ ಪರಿಹಾರಕನಾದ ವಾಯುವು. ರುದ್ರಸ್ಯ ಪುತ್ರಾಃ=) ವಾಯುವಿನ ಪುತ್ರರಾದ ಮರುತ್‌ಗಳು, ಸತ್ಯಂ= ಯಥಾರ್ಥ ಹೇಗೆ ಆದೀತೋ ಹಾಗೆಯೇ, (ಮಾಯೆಯಿಂದ ಅಲ್ಲ.) ಧನ್ವನ್ ಚಿತ್=(ಸಮಾನೌ ಮರುಧನ್ವಾನೌ) ಮರು ಪ್ರದೇಶದಲ್ಲಿಯೂ, ಅವಾತಾಂ=ಗಾಳಿಯಿಲ್ಲದ (ಅಚೇತನವಾದ ಗಾಳಿ ಹೊರತು) ಮಿಹಂ= (ಮಿಹಸೇಚನೇ ವೃಷ್ಟಿಯನ್ನು, ಆ=ಚೆನ್ನಾಗಿ, ಇಚ್ಛೆಯಿಂದಲೇ. ಕೃಣ್ವಂತಿ=ಮಾಡುತ್ತಾರೆ. ॥ ೭ ॥

ಭಾ॥ (೧) ಅಪ್ರಮೇಯಾ ಯಥಾ ಸತ್ಯಂ ಧನ್ವನ್ಯಪಿ ಹಿ ಸೇಚನಂ । ರುಜಾಂ ವಿದ್ರಾವಕಸ್ಯೈವ ವಾಯೋಃ ಪುತ್ರಾ ಹಿ ರುದ್ರಿಯಾಃ ॥ ವಿವಾತಸ್ಯಾಚೇತನಂ ವಾತಂ ವೃಷ್ಟಿಂ ಕೃಣ್ವಂತಿ ಹೀಚ್ಛಯಾ ॥ ೭ ॥

ಅ। (೧) ರೋಗಗಳನ್ನು ಓಡಿಸುವ (ಪರಿಹರಿಸುವ) ವಾಯುದೇವರ ಮಕ್ಕಳು ರುದ್ರಿಯರೆನಿಸುತ್ತಾರೆ. ಇಂತಹ ಅಪರಿಮಿತ ಸಾಮರ್ಥ್ಯವುಳ್ಳ ಮರುತ್ ಗಳು ಸತ್ಯ ಹೇಗೆ ಆದೀತೋ ಹಾಗೆ ಮರು ಪ್ರದೇಶದಲ್ಲಿಯೂ ಕೂಡ ಅಚೇತನವಾದ ಗಾಳಿ ಹೊರತು ಕೂಡ (ಗಾಳಿಯಿಲ್ಲದೇನೇ) ಸೇಚನಂ=ವೃಷ್ಟಿಯನ್ನು ಇಚ್ಛೆಯಿಂದಲೇ ಮಾಡುತ್ತಾರೆ. ॥ ೭ ॥

ಋ ॥ (೪೬೪) ವಾಶ್ರೇವ ವಿದ್ಯುನ್ಮಿಮಾತಿ ವತ್ಸಂ ನ ಮಾತಾ ಸಿಷಕ್ತಿ ।
ಯದೇಷಾಂ ವೃಷ್ಟಿರಸರ್ಜಿ ॥ ೮ ॥

ಅ ॥ ಯತ್=ಯಾವ ಕಾರಣದಿಂದ, ಏಷಾಂ=ಮರುತ್‌ಗಳ ಸಕಾಶದಿಂದ, ವೃಷ್ಟಿಃ ಮಳೆಯು, ಅಸರ್ಜಿ=ಸೃಷ್ಟಿಸಲ್ಪಟ್ಟಿದೋ, (ಯಾವಾಗ ಈ ಮರುತ್‌ಗಳು ವೃಷ್ಟಿ ಯನ್ನು ಸೃಷ್ಟಿಸುತ್ತಾರೋ,) ಆಗ, ವಿದ್ಯುತ್=ಮಿಂಚು, ಮಿಮಾತಿ=ಧ್ವನಿಯನ್ನು ಪ್ರಕಾಶಗೊಳಿಸುವುದು, ಹೇಗೆಂದರೆ—ವಾಶ್ರೇವ=(ವಾಶ್ರಾ

ತೃಪ್ತಸ್ತನಾಧೇನುಃ ಎಂಬಕೋಶದಿಂದ) ಕರುಗಳಲ್ಲಿ ಪ್ರೀತಿಯುಳ್ಳ ತಾಯಿಯು ಹೇಗೆ ಕರುವನ್ನು ನೋಡು ವುದೋ ಹಾಗೆಯೇ ಪ್ರಕಾಶಗೊಳಿಸುವುದು. ಮತ್ತು ವಾಶ್ರಾ=ತಾಯಿಯಾದ ಗೋವು ವತ್ಸಂ ನ=ಕರುವ ನ್ನೆಂಬಂತೆ (ಭೂಮಿಯಲ್ಲಿರತಕ್ಕ ವಸ್ತುಗಳನ್ನು) ವಿದ್ಯುತ್=ಮಿಂಚು ಸಿಷಕ್ತಿ=ಆಲಿಂಗಿಸುತ್ತದೆ. (ಏನಂಥ ಮಿಂಚಿನ ಕಾರ್ಯವಾದ ಮಳೆಯೂ ಕೂಡ ಮರುತ್‌ಗಳಿಂದಲೇ ಆಗುವುದು.) || ೮ ||

ಭಾ || (೧) ಏಷಾಂ ಸಕಾಶಾದ್ವೃಷ್ಟಿಶ್ಚ ವಿದ್ಯುದ್ಭೂಮಿಂ ಪ್ರಕಾಶಯೋಕ! (೨) ಗೌರ್ವತ್ಸ ಮಿವ ಭೂಮ್ಯಾಂ ಚ || ೮ ||

ಅ || (೧) ಈ ಮರುತ್‌ಗಳ ಸಕಾಶದಿಂದ ವೃಷ್ಟಿಯು ಸೃಷ್ಟಿಸಲ್ಪಟ್ಟಿತು. (ಮರುತ್‌ಗಳು ವೃಷ್ಟಿಯನ್ನು ಸೃಷ್ಟಿಸುತ್ತಾರೆ.) ಆಗ ಮಿಂಚು ಭೂಮಿಯನ್ನು ಪ್ರಕಾಶಗೊಳಿಸುವುದು. (೨) ಗೋವು ಕರುವನ್ನೆಂಬಂತೆ ಭೂಮಿಯಲ್ಲಿರತಕ್ಕ ವಸ್ತುಗಳನ್ನೆಲ್ಲಾ ಮಿಂಚು ಆಲಿಂಗಿಸುತ್ತದೆ. || ೮ ||

ಋ || (೪೬೫) ದಿವಾ ಚಿತ್ತಮಃ ಕೃಣ್ವಂತಿ ಪರ್ಜನ್ಯೇನೋದವಾಹೇನ ||
ಯತ್ಪೃಥಿವೀಂ ವ್ಯುಂದಂತಿ || ೯ ||

ಅ || ಮರುತಃ=ಮರುತ್‌ಗಳು, ಯತ್=ಯಾವಾಗ, ಪೃಥಿವೀಂ=ಲೋಕವನ್ನು ವ್ಯುಂದಂತಿ= (ಉಂದೀಕ್ಲೇದನೇ-ಕ್ಲೇದ ಆರ್ದ್ರೀಭಾವೇ) ತಾಯಿಯಂತೆ ಸೇಚಿಸುತ್ತಾರೋ, ಹೇಗೆ ತಾಯಿಯಾದ ಗೋವು ಕರು ವನ್ನು ಹಾಲಿನಿಂದ ಸೇಚಿಸುತ್ತದೋ (ತೃಪ್ತಿಗೊಳಿಸುತ್ತದೋ,) (ಹಾಗೆಯೇ ಭೂಮಿಯನ್ನು ಯಾವಾಗ ವೃಷ್ಟಿಯಿಂದ ಒದ್ದೆ ಮಾಡುತ್ತಾರೋ, ಆಗ ಉದವಾಹೇನ=ಮೇಘ ಮಂಡಲದಿಂದ, ದಿವಾಚಿತ್=ಹಗಲೂ ಕೂಡ, ತಮಃ=ಕತ್ತಲೆಯನ್ನು ಕೃಣ್ವಂತಿ=(ಕೃವಿ ಹಿಂಸಾಕರಣಯೋಃ) ಮಾಡುತ್ತಾರೆ. || ೯ ||

ಭಾ || ಲೋಕಂ ಸಿಂಚಂತಿ ಮಾತೃವತ್ || ೯ ||

ಅ || ಗೋವು ಕರುವನ್ನು ಹಾಲಿನಿಂದ ತೃಪ್ತಿಗೊಳಿಸುವಂತೆ ಲೋಕವನ್ನು ವೃಷ್ಟಿಯಿಂದ ಮರುತ್‌ಗಳು ತೃಪ್ತಿಗೊಳಿಸುತ್ತಾರೆ. || ೯ ||

ಋ || (೪೬೬) ಅಧ ಸ್ವನಾನ್ಮರುತಾಂ ವಿಶ್ವಮಾ ಸದ್ಮ ಪಾರ್ಥಿವಂ |
ಅರೇಜಂತ ಪ್ರ ಮಾನುಷಾಃ || ೧೦ || ೧೬ ||

ಅ || ಅಧ=ಇನ್ನೊಂದು ವಿಷಯವನ್ನೂ ಹೇಳುತ್ತೇವೆ. (ಯಾವುದೆಂದರೆ) ಮರುತಾಂ=ವಾಯುಗಳ, ಸ್ವನಾತ್=ಧ್ವನಿಮಾತ್ರದಿಂದ ಆ=ಸುತ್ತಲೂ ಇರುವ, ವಿಶ್ವಂ=ಎಲ್ಲಾ, ಪಾರ್ಥಿವಂ=ಪೃಥಿವಿಯಲ್ಲಿ ಹುಟ್ಟ ತಕ್ಕ, ಸದ್ಮ=ಗೃಹಗಳ ಸಮುದಾಯವು, ಗೃಹಾಭಿಮಾನಿಗಳ ಸಮುದಾಯವು, ಮಾನುಷಾಃ=ಅಲ್ಲಿರುವ ಮನು ಷ್ಯರೂ ಕೂಡ ಪ್ರ ಅರೇಜಂತ (ದೇಜೃ ಕಂಪನೇ.) ಹೆದರಿದರು. || ೧೦ || ೧೬ ||

ಭಾ || (೧) ಮಾನುಷಾದಿಕ್ರಮನ್ಯಚ್ಚ ಬಿಭೇದೇಷಾಂ ಸ್ವನಾದಪಿ | ಗೃಹಮಾನಿನೋ ಗೃಹಾದ್ಯಂ ವಾ ಚಚಾಲೈಷಾಂ ಸ್ವನಾದಪಿ ||೧೦ || ೧೬ ||

ಅ || (೧) ಈ ಮರುತ್‍ಗಳ ಧ್ವನಿ ಮಾತ್ರದಿಂದಲೇ, ಮನುಷ್ಯರೇ ಮೊದಲಾದವರು ಇತರರಾದುದೂ ಕೂಡ ಹೆದರುವವು. (೨) ಈ ಮರುತ್‍ಗಳ ಧ್ವನಿ ಮಾತ್ರದಿಂದಲೇ ಗೃಹಾಧ್ಯಭಿಮಾನಿಗಳು ಗೃಹಾದಿಗಳು ಎಲ್ಲವೂ ಹೆಂದಾಡಿದವು.

ವಿ || (1) ಮಾನುಷಾದಿಕಂ ಎಂದು ಹೇಳದೆ ಮಾನುಷಾದಿತ್ವಂ ಎಂದು ತ್ವಪ್ರತ್ಯಯ ಸಹಿತವಾಗಿ ಹೇಳಿದ್ದು ಜಾತಿ ವ್ಯಕ್ತಿಗಳಿಗೆ ಅಭೇದವು ಎಂದು ತಿಳಿಸುವುದಕ್ಕಾಗಿ. (2) ಅಥವಾ ಪರಮೇಶ್ವರ ವಿಷಯೀವಾದ ಸ್ತುತಿರೂಪವಾದ ಧ್ವನಿಯಿಂದ ಕರ್ಮ ಫಲ ರೂಪವಾದುದು ಯಾವುದು ಮಾನುಷತ್ವಪದಿಯೋ, ಯಾವುದು ಗೃಹಾದಿಗಳಲ್ಲಿ ಅಭಿಮಾನವಿದೆಯೋ, ಅದೆಲ್ಲವೂ ಹೆದರಿದಂತೆಯೇ ಓಡಿತು, ಎಂಬ ಅರ್ಥವನ್ನು ಸೂಚಿಸುವುದಕ್ಕಾಗಿ. ಮಾನುಷಾದಿತ್ವಂ ಎಂದು ಭಾವ ಪ್ರಧಾನ ನಿರ್ದೇಶವಾಗಿ ವ್ಯಾಖ್ಯಾನ ಮಾಡಿದ್ದು, (3) ಹಾಗಾದರೆ ಅಚೇತನರಾಗಿರುವ ಗೃಹಗಳಿಗೆ ಭಯವು ಹೇಗೆಂದರೆ. ಸದ್ಮ ಶಬ್ದದಿಂದ ಗೃಹಾಭಿಮಾನಿಗಳನ್ನೂ ಇಟ್ಟುಕೊಳ್ಳಬೇಕು. (4) ಅಥವಾ ಪ್ರಾರೇಜಂತ ಎನ್ನುವುದು ಭಯಾರ್ಥಕವಲ್ಲ. ಮತ್ತೆ ಚಲನಾರ್ಥಕವು. ತಥಾಚಸದ್ಮ=ಮನೆಯು, ಹೀಗೆ ಅರ್ಥ ಇಟ್ಟುಕೊಂಡರೂ ವಿರೋಧವಿಲ್ಲ. || ೧೦ || ೯೬ ||

ಋ || (೪೬೭) ಮರುತೋ ವೀಳುಪಾಣಿಭಿಶ್ಚಿತ್ರಾ ರೋಧಸ್ವತೀರನು | ಯಾತೇಮಖಿದ್ರಯಾಮಭಿಃ || ೧೧ ||

ಅ || ಮರುತಃ=ಎಲೋ ಮರುತ್‍ಗಳೇ (ನೀವು) ವೀಳು ಪಾಣಿಭಿಃ=ದೃಢಗಳಾದ ತಮ್ಮ ಹಸ್ತಗಳಿಂದಲೂ ಅಖಿದ್ರಯಾಮಭಿಃ ಈಮ್=(ಖಿದದ್ಯೈನ್ಯೇ) ಖೇದವಿಲ್ಲದಿರುವ ಪಾದಗಳಿಂದಲೂ, ಚಿತ್ರಾಃ=ವಿಚಿತ್ರಗಳಾದ, ರೋಧಸ್ವತೀಃ=ನದಿಗಳನ್ನು, ಅನುಸರಿಸಿ ಹೋಗಿರಿ. (ಯಾವ ನದಿಗಳ ತೀರಗಳಲ್ಲಿ ನಾವು ತಪಸ್ಸನ್ನು ಮಾಡುತ್ತಿರುತ್ತೇವೋ ಅಂತಹ ನದಿಗಳನ್ನು ಕುರಿತು ಬನ್ನಿರಿ.) || ೧೧ ||

ಭಾ || (೧) ಅಖಿನ್ನೈರ್ಗಮನೈಶ್ಚೈವ ದೃಢಸ್ತ್ರೀಯೈಶ್ಚ ಪಾಣಿಭಿಃ | ಅನುಯಾತ ನದೀಶ್ಚಿತ್ರಾಃ || ೧೧ ||

ಅ || (ಗಚ್ಛಂತ್ಯೇಭಿಃ ಇತಿ ಗಮನಾಃ=ಪಾದಗಳು,) ಖೇದವಿಲ್ಲದ ಪಾದಗಳಿಂದಲೂ ದೃಢಗಳೂ ತಮ್ಮದ್ದೂ ಆದ ಹಸ್ತಗಳಿಂದಲೂ ವಿಚಿತ್ರಗಳಾದ ನದಿಗಳನ್ನು ಕುರಿತು ಹೋಗಿರಿ.

ವಿ || ಹೆಂದಾಡಿಸಿದರೂ ಶ್ರಮವಿಲ್ಲದಿರುವ ಹಸ್ತಗಳನ್ನು ಹೆಂದಾಡಿಸುತ್ತಿರುತ್ತಾರೆ. ವೇಗವುಳ್ಳ ಗಮನಗಳಿಂದ ಯಾವ ನದೀ ತೀರಗಳಲ್ಲಿ ನಾವು ತಪಸ್ಸನ್ನು ಮಾಡುತ್ತಿರುತ್ತೇವೋ ಅಂತಹ ನದಿಗಳನ್ನು ಕುರಿತು ಹೋಗಿರಿ. (2) ಅಥವಾ ಋಗ್ಭಾಷ್ಯದಲ್ಲಿರತಕ್ಕ ಯಾಮನ್ ಗಮನ ಶಬ್ದಗಳು ಕರಣಾರ್ಥಕಗಳು. ಆದ ಕಾರಣ ನೀವು ಹಸ್ತ ಪಾದಗಳಿಂದ ಕೂಡಿದವರು. ಅಚೇತನ ವಾಯು ರೂಪರಲ್ಲ ಎಂದರ್ಥವು. || ೧೧ ||

ಋ || (೪೬೮) ಸ್ಥಿರಾಃ ವಃ ಸಂತು ನೇಮಯೋ ರಥಾ ಅಶ್ವಾಸ ಏಷಾಂ | ಸುಸಂಸ್ಕೃತಾ ಅಭಿ ಶವಃ || ೧೨ ||

ಅ॥ (ಎಲೋ ಮರುತ್ತುಗಳೇ,) ವಃ=ನಿಮಗೆ, (ಇಲ್ಲಿಗೆ ಬರಲಿಕ್ಕೆ) ಸ್ಥಿರಾಃ=ದೃಢಗಳಾದ, ಸುಸಂಸ್ಕೃತಾಃ=ಚೆನ್ನಾಗಿ ಸಂಸ್ಕಾರವುಳ್ಳ, ಅಭೀಷವಃ=ತೇಜಸ್ಸುಳ್ಳ, ರಥಾಃ=ರಥಗಳು ಸಂತು=ಇರುತ್ತವೆ. ಏಷಾಂ=ಈ ರಥಗಳಿಗೆ ನೇಮಯಶ್ಚ=ಚಕ್ರಗಳು, ಸ್ಥಿರಾಃ=ದೃಢಗಳಾಗಿ ಸಂತು=ಇರುತ್ತವೆ. ಅಶ್ವಾಸಃ=ಆ ರಥಗಳ ಸಂಬಂಧವುಳ್ಳ ಕುದುರೆಗಳೂ ಕೂಡ ದೃಢಗಳಾಗಿವೆ. (ಅಂತಹ ರಥಗಳಿಂದ ಬನ್ನಿರಿ.) ॥ ೧೨ ॥

ಭಾ॥ ಸ್ಥಿರಾಃ ಸಂತಿ ರಥಾದಯಃ ॥ ೧೩ ॥

ಅ॥ ರಥ ಮೊದಲಾದವುಗಳೆಲ್ಲವೂ ದೃಢಗಳಾಗಿಯೇ ಇರುತ್ತವೆ. ॥ ೧೩ ॥

ಋ॥ (೪೭೯) ಅಚ್ಛಾ ವದಾ ತನಾ ಗಿರಾ ಜರಾಯೈ ಬ್ರಹ್ಮಣಸ್ಪತಿಂ। ಅಗ್ನಿಂ ಮಿತ್ರಂ ನ ದರ್ಶತಂ॥ ॥ ೧೪ ॥

ಅ॥ (ಎಲೋ ಕಣ್ವಋಷಿಯೇ, ನೀವು) ಬ್ರಹ್ಮಣಃ ಪತಿಂ=ಚತುರ್ಮುಖ ಬ್ರಹ್ಮನಿಗೆ ಸ್ವಾಮಿಯಾದ ಶ್ರೀವಿಷ್ಣುವನ್ನೂ, ಭಾರತೀಪತಿಯಾದ ಮುಖ್ಯಪ್ರಾಣನನ್ನೂ ತನಾ=(ತನುವಿಸ್ತಾರೇ ಕರಣೇ(ಚ) ವ್ಯಾಪ್ತವಾದ ಬಹು ವಿಷಯಕವಾದ, ಗಿರಾ=ಮಾತಿನಿಂದ, ಜರಾಯೈ=ಚೆನ್ನಾಗಿ ಸ್ತುತಿರೂಪವಾಗಿ, ಅಗ್ನಿಂ=ಅಗ್ನಿಯನ್ನೆಂತೆ, ಮಿತ್ರಂ ನ=ಸೂರ್ಯನನ್ನೆಂಬಂತೆ, ದರ್ಶತಂ=ಹೇಗೆ ಅಗ್ನಿಸೂರ್ಯರು ಬೇರೆ ಪ್ರಕಾಶದ ಅಪೇಕ್ಷೆಯಿಲ್ಲದೇನೇ ತಮ್ಮ ಮಹಿಮೆಯಿಂದಲೇ ಕಾಣಿಸಿಕೊಳ್ಳಲ್ಪಡುತ್ತಾರೋ ಹಾಗೆಯೇ ತನ್ನ ಪ್ರಸಾದದಿಂದಲೇ ಕಾಣಲ್ಪಡತಕ್ಕವನನ್ನಾಗಿ ಅಚ್ಛವದ=ಯಥಾಯೋಗ್ಯವಾಗಿ ಹೇಳಿರಿ. ॥ ೧೪ ॥

ಭಾ॥ (೧) ಬ್ರಹ್ಮಣಶ್ಚ ಪತಿಂ ವಿಷ್ಣುಂ ಯಥಾವದ್ವ್ಯಾಪ್ತಯಾ ಗಿರಾ। ಜರಾಯೈ ಸಂಸ್ತುತಿತ್ವೇನ (೨) ತೃತೀಯಾ ಭಾವರೂಪಿಣೀ॥ (೩) ಸರ್ವಾ ವಿಭಕ್ತಯಶ್ಚೇತ್ಥಂ ಭಾವವಾಚಿನ್ಯ ಏವ ಚ॥ ಮಹಾವ್ಯಾಕರಣೇ ಸೂತ್ರಮಿತಿ (೪) ಸಂಸ್ತುತಿರೂಪತಃ (೫) ವಿದ ವಿಷ್ಣುಂ ಸ್ವಪ್ರಕಾಶಮಗ್ನಿವತ್ಸೂರ್ಯವತ್ತಥಾ॥ (೬) ಆಹ ಚಾತ್ಮಾನಮೇವಾತ್ರ ದಾರ್ಢ್ಯೇ ಸ್ವಪ್ರತಿಯೋಗಿತಃ॥ ಇತಿ ಸೂತ್ರಾತ್॥ ॥ ೧೪ ॥

ಅ॥ (೧) ಚತುರ್ಮುಖನಿಗೆ ಸ್ವಾಮಿಯಾದ ಶ್ರೀವಿಷ್ಣುವನ್ನೂ ಭಾರತೀಪತಿಯಾದ ಶ್ರೀವಾಯುವನ್ನೂ ಬಹು ವಿಷಯಕವಾದ ಮಾತಿನಿಂದ (ಜರಾಯೈ=ಜೃಷ್ ವಯೋಹಾನೌ) ಚೆನ್ನಾಗಿ ಸ್ತುತಿರೂಪದಿಂದ ಕೂಡಿದ ಮಾತಿನಿಂದ ಯೋಗ್ಯ ರೀತಿಯಾಗಿ ಹೇಳಿರಿ. (೨) (ಜರಾಯೈ ಎಂಬ ಚತುರ್ಥಿಯು ತೃತೀಯಾರ್ಥದಲ್ಲಿ. ತೃತೀಯಾವಿಭಕ್ತಿಯು ಯಾವ ಅರ್ಥದಲ್ಲಿ ಎಂದರೆ) ತೃತೀಯಾ ವಿಭಕ್ತಿಯು ಭಾವರೂಪವುಳ್ಳದ್ದು. ಇತ್ಥಂಭೂತಲಕ್ಷಣಾರ್ಥಕವಾದುದು, (ಅಂದರೆ— ಫಲದಾನ ಸಾಮರ್ಥ್ಯರೂಪವಾದ ಒಂದಾನೊಂದು ಪ್ರಕಾರವನ್ನು ಹೊಂದಿರುವ ಅಂದರೆ ಫಲವನ್ನು ಕೊಡಲು ಸಮರ್ಥವಾದ ವಚನವನ್ನು ತಿಳಿಸಿಕೊಡುವುದು ಸಂಸ್ತುತಿತ್ವವು. ಅದನ್ನು ಹೇಳುವ ಶಬ್ದದಲ್ಲಿ ಚತುರ್ಥೀ ವಿಭಕ್ತಿಯು ಬರುವುದು (೩) (ಅಥವಾ ಚತುರ್ಥೀ ವಿಭಕ್ತಿಯನ್ನು ತೃತೀಯಾರೂಪವಾಗಿ ವ್ಯತ್ಯಾಸ ಮಾಡಿಕೊಳ್ಳುವುದು ಬೇಡ. ಜರಾಯೈಎಂಬ ಚತುರ್ಥೀ ವಿಭಕ್ತಿಗೇನೇ ಇತ್ಥಂಭೂತಲಕ್ಷಣಾರ್ಥವಾಗಿ ವ್ಯಾಖ್ಯಾನ ಮಾಡಬೇಕು. ಹೇಗೆಂದರೆ) ಸಮಸ್ತ ವಿಭಕ್ತಿಗಳೂ ಕೂಡ ಇತ್ಥಂಭೂತಲಕ್ಷಣರೂಪ ಅರ್ಥವನ್ನು ಹೇಳುವವುಗಳೇ ಹೀಗೆಯೇ ಮಹಾವ್ಯಾಕರಣದಲ್ಲಿ ಈ ಅರ್ಥವನ್ನು ಪ್ರತಿಪಾದಿಸುವ ಸೂತ್ರವಿದೆ. (೪) (ಇದ

ರಿಂದ ಯಾವ ಅರ್ಥವು ಸಿದ್ಧಿಸಿಕೆಂಡರೆ) ಫಲವನ್ನು ಕೊಡಲಿಕ್ಕೆ ಸಮರ್ಥವಾದುದು ಎಂಬ ಅರ್ಥವನ್ನು ತಿಳಿಸಿಕೊಡುವ ಚೆನ್ನಾಗಿ ಸ್ತುತಿಶ್ಯದಿಂದ ಕೂಡಿದ ವಾತಿನಿಂದ. ಎಂದರ್ಥವುಂಟಾಯ್ತು.) (೫) ಅಗ್ನಿ ಸೂರ್ಯರಂತೆ ಸ್ವಾಧೀನ ಪ್ರಕಾಶವುಳ್ಳ ಶ್ರೀವಿಷ್ಣುವನ್ನು ತಿಳಿ. ಅಂದರೆ (ಅಗ್ನಿ ಸೂರ್ಯರು ಇತರ ಪ್ರಕಾಶದ ಅಪೇಕ್ಷೆಯಿಲ್ಲದೆನೇ ತಮ್ಮ ಮಹಿಮೆಯಿಂದಲೇ ಹೇಗೆ ಬೆಳಗಿಸಿಕೊಳ್ಳುತ್ತಾರೋ. ಹಾಗೆಯೇ ತನ್ನ ಪರಮಾನು ಗ್ರಹದಿಂದಲೇ ಬೆಳಗಿಸಿಕೊಳ್ಳುವವನು. (ಪಾತ್ರಂ ನ ಪರ=ತಂ ಎನ್ನುವಲ್ಲಿ ದರ್ಶಿತ ಶಬ್ದವು ಅಗ್ನಿಗೆ ವಿಶೇಷಣ ವಲ್ಲ. ವಿಷ್ಣುವಿಗೇನೇ ವಿಶೇಷಣವು ಎಂದು ತೋರಿಸುವುದಕ್ಕಾಗಿ ಪುನಃ ವಿದವಿಷ್ಣುಂ ಎಂಬಲ್ಲಿ ವಿಷ್ಣುಂ ಎಂದು ಹೇಳಿದ್ದು) (ಈ ಸೂಕ್ತವು ಅಗ್ನಿಯನ್ನೇ ಪ್ರತಿಪಾದಿಸುವುದೆಂದು ಹೇಳಿದವರ ಮಾರುತ ಸೂಕ್ತವೆಂದು ದತ್ತ ವಿರುದ್ಧವಾಗುವುದು.) (೬) (ಈ) ಋಕ್ಕಿನಲ್ಲಿ ವದ ಎಂದು ಯಾರನ್ನು ಕುರಿತು ಹೇಳುವುದೆಂದರೆ) ತನ್ನನ್ನು ಕುರಿತೇ ವದ ಎಂದು ಹೇಳಿರುವನು. (ಹಾಗಾದರೆ ಯುಷ್ಮತ್ ಶಬ್ದವಿದ್ದರೇನೇ ಮಧ್ಯಮ ಪುರುಷವು (ವದ ಎಂಬುವುದು) ಕೊಡುವುದರಿಂದ ಆತ್ಮನ್ ಶಬ್ದಕ್ಕೆ ಯುಷ್ಮದರ್ಥತ್ವವು ಹೇಳು ಎಂಬ ಅರ್ಥವು) ಕೂಡ ದಿರುವುದರಿಂದ ವದ ಎಂಬ ಮಧ್ಯಮ ಪುರುಷವು ಹೇಗೆ ಕೂಡುತ್ತದೆ? ಎಂದರೆ) ದಾರ್ಢ್ಯ ಎಂಬ ಅರ್ಥದಲ್ಲಿ ಆತ್ಮಶಬ್ದಕ್ಕೆ ಯುಷ್ಮದರ್ಥತ್ವವಿದೆ. ಎಂಬ ಸೂತ್ರದಿಂದ ಇದು ಉಪಪನ್ನವಾಗುತ್ತದೆ. ॥ ೧೩ ॥

ಋ ॥ (೪೭೦) ಮಿಮೀಹಿ ಶ್ಲೋಕಮಾಸ್ಯೇ ಪರ್ಜನ್ಯ ಇವ ತತನಃ ।
ಗಾಯ ಗಾಯತ್ರಮುಕ್ಥ್ಯಂ ॥ ೧೪ ॥

ಅ ॥ (ತತ್ಮನ್=ಎಲೋ ಆತ್ಮನೇ, ತ್ವಂ=ನೀನು,) (ಈ ವಿಷ್ಣುವಿನ) ಶ್ಲೋಕಂ=ಕೀರ್ತಿಯನ್ನು ಆಸ್ಯೇ= ಮುಖದಲ್ಲಿ, ಮಿಮೀಹಿ =(ಮಾಙ್ ಮಾನೇ.) ನಿರ್ಮಿಸುತ್ತಿರು. ಸದಾ ಮಾಡುತ್ತಿರು- ಪರ್ಜನ್ಯ ಇವ =ಧ್ವನಿಯುಕ್ತವಾದ ಮೇಘದಂತೆ, (ಪರ್ಜನ್ಯೋ ಮೇಘಶಬ್ದೇ(ತಿ ಧ್ವನದಂಬುದಶಕ್ರಯೋ.) ಇತಿವಿಶ್ವಃ) ತತನಃ=(ತನುವಿಸ್ತಾರೇ ಕರಣೇ(ಚ) ವಿಸ್ತರಿಸು, ತಿಷ್ಯರಿಗೂ ಉಪದೇಶಿಸು. (ಅಂದರೆ ಮೇಘವು ಹೇಗೆ ಮಳೆ ಯನ್ನು ಸರ್ವತ್ರ ವಿಸ್ತರಿಸುತ್ತದೋ, ತನ್ನಲ್ಲಿ ಮಾತ್ರ ನೀರನ್ನು ಮಾಡುವುದಲ್ಲ) ಹಾಗೆಯೇ ನೀನು ಶ್ರೀ ಹರಿಯ ಸತ್ಯವಾದ ಕೀರ್ತಿಯನ್ನು ಜಗತ್ತಿನಲ್ಲಿಯೂ ವಿಸ್ತರಿಸು ) ನ ಸ್ತು ಉಕ್ಥ್ಯಂ= (ಪ್ರಾಣೋ ವಾ ಉಕ್ಥ್ಯಂ ಎಂಬ ಶ್ರುತಿಯಿಂದ ಉಕ್ಥ್ಯಃ =ಚತುರ್ಮುಖನಿಗೆ ಅಧಿಪತಿಯಾದ ಶ್ರೀವಿಷ್ಣುವು) ವಿಷ್ಣು ವಿಷಯಕ ವಾದ ಗಾಯತ್ರಂ =ಗಾಯತ್ರ ಸಾಮವನ್ನು ಗಾಯ=(ಗೈ ಶಬ್ದೇ) ಗಾನಮಾಡು ॥ ೧೪ ॥

ಭಾ ॥ (೧) ಕೀರ್ತಿಮಸ್ಯ ವಿಷ್ಣೋಃ ಕುರುಮುಖೇ ಸದಾ । (೨) ವಿಸ್ತಾರಯತಿ ಪರ್ಜನ್ಯೋ ಯದ್ವದ್ವೃಷ್ಟಿಂ ಛಿಪ್ತ್ಯೈವ ಚ । ವಿಸ್ತ್ರಣೀಹಿ ತಥೇಶಸ್ಯ ತಥಾ ಕೀರ್ತಿಂ ಜಗತ್ಯಪಿ ॥ ೧೪ ॥

ಅ ॥ (೧) (ಇಲ್ಲಿಯೂ ಆತ್ಮ ಋಷಿಯು ತನ್ನನ್ನು ಕುರಿತೇ ಹೇಳುತ್ತಾನೆ.) ಈ ವಿಷ್ಣುವಿನ ಕೀರ್ತಿ ಯನ್ನು ಆಸ್ಯದಲ್ಲಿ ಸದಾ ಮಾಡುತ್ತಿರು. (ಸರ್ವದಾ ಸ್ತುತಿಸುತ್ತಿರು.) (೨) ಧ್ವನಿ ಗೈಯುವ ಮೇಘವು ವೃಷ್ಟಿ ಯನ್ನು ಹೇಗೆ ವಿಸ್ತರಿಸುತ್ತದೋ ಹಾಗೆಯೇ ಶ್ರೀಹರಿಯ ಕೀರ್ತಿಯನ್ನು ಜಗತ್ತಿನಲ್ಲಿಯೂ ಕೂಡ ವಿಸ್ತಾರ ಗೊಳಿಸು. ॥ ೧೪ ॥

ಋ || (೪೭೧) ವಂದಸ್ವ ಮಾರುತಂ ಗಣಂ ತ್ವೇಷಂ ಪನಸ್ಯುಮರ್ಕಿಣಂ ।

ಅಸ್ಮೇ ವೃದ್ಧಾ ಅಸನ್ನಿಹ ॥ ೧೫ ॥ ೧೭ ॥ ೩೮ ॥

ಅ || (ಇಲ್ಲಿಯೂ ಕಣ್ವ ಋಷಿಯು ತನ್ನನ್ನು ಕುರಿತೇ ಹೇಳುವುದು.) (ಎಲೋ ಆತ್ಮನೇ ನೀನು) ತ್ವೇಷಂ=ಪ್ರಕಾಶವುಳ್ಳ, ಪನಸ್ಯುಂ=(ಪನ ಜ್ಞಾನೇ) ಜ್ಞಾನವೇ ಸ್ವಭಾವವಾಗಿ ಉಳ್ಳ ಅರ್ಕಿಣಂ= (ಅರ್ಕಾಃ= ಋಚಃ ಅಸ್ಯ ಜ್ಞಾಪಕಾಃ ಸಂತಿ ಎಂಬ ವ್ಯುತ್ಪತ್ತಿಯಿಂದ) ಋಕ್ಕುಗಳಿಂದ ಜ್ಞೇಯನಾದ, ಮಾರುತಂ ಗಣಂ= ಮರುತ್‌ಗಳ ಸಂಬಂಧಿಯಾದ ಗಣವನ್ನು, ವಂದಸ್ವ=ಸ್ತುತಿಸು. (ಸ್ತುತಿಸಲಿಕ್ಕೆ ತಿಳಿಯುವುದಿಲ್ಲ, ಎಂದು ಹೇಳ ಕೂಡದು. ಏಕೆಂದರೆ) ಅಸ್ಮೇ=ನಮಗೆ, ಇಹ=ಈ ಮರುತ್ ನಿಮಿತ್ತವಾಗಿ ಮರುತ್‌ಗಳ ಅನುಗ್ರಹದಿಂದ ವೃದ್ಧಾಃ=ವೃದ್ಧರು, ಅಸನ್=ಜ್ಞಾಪಕರಾದರು. || ೧೫ ||

ಭಾ || (೧) ಪನಸ್ಯುಂ ಜ್ಞಾನಶೀಲಂ ಚ ವಿಜ್ಞೇಯಂ ಗಣಮರ್ಕಿಣಂ (೨) ಅಭವನ್ ಜ್ಞಾಪಕಾ ವೃದ್ಧಾಃ ಅಸ್ಮಾಕಂ ತದನುಗ್ರಹಾತ್ || ೧೫ ||

ಅ || (೧) ಪನಸ್ಯುಂ ಜ್ಞಾನವೇ ಸ್ವಭಾವವಾಗಿ ಉಳ್ಳದ್ದು, ಅರ್ಕಿಣಂ=ಋಕ್ಕುಗಳಿಂದ ತಿಳಿಯಲರ್ಹ ವಾದುದು, ಇಂತಹ ಮರುದ್ಗಣವನ್ನು ಸ್ತುತಿಸು. (೨) ನಮಗೆ ಆ ಮರುತ್‌ಗಳ ಅನುಗ್ರಹದಿಂದ ವೃದ್ಧರು ಜ್ಞಾಪಕರಾಗುತ್ತಾರೆ. (ವೃದ್ಧರು ತತ್ವವನ್ನು ತಿಳಿಸಿರುವರು.) || ೧೫ || ೧೭ || ೬ ||

ಅವ|| ಪ್ರಯುತ್ ಇತ್ಯಾದಿಗಳು ೧೦ ಋಕ್ಕುಗಳುಳ್ಳದ್ದು. ೨ ವರ್ಗಗಳು. ಮರುದ್ದೇವತಾಕವು. ಪ್ರಗಾಥಾ ಛಂದಸ್ಸವು. ಅವುಗಳಲ್ಲಿ ವಿಷಮ ಋಕ್ಕುಗಳು ಬೃಹತೀ ಛಂದಸ್ಕಗಳು. ಸಮ ಋಕ್ಕುಗಳು ಸತೋ ಬೃಹತೀ ಛಂದಸ್ಕಗಳು. ಕಣ್ವರೇ ಋಷಿಗಳು. ೩ನೇ ಸೂಕ್ತವು.

ಋ || (೪೭೨) ಪ್ರಯದಿತ್ಥಾ ಪರಾವತಃ ಶೋಚಿರ್ನ ಮಾನಮಸ್ಯಥ ।

ಕಸ್ಯ ಕ್ರತ್ವಾ ಮರುತಃ ಕಸ್ಯ ವರ್ಪಸಾ ಕಂ ಯಾಥ ಕಂ ಹ ಧೂತಯಃ

|| ೧ ||

ಅ || ಮರುತ್:=ಎಲೋ ಮರುತ್‌ಗಳೇ ನೀವು ಪರಾವತಃ=ದೂರದಲ್ಲಿಯೇ (ಶ್ರೀಹರಿಯ ಸ್ಥಾನವಾದ ಸ್ವರ್ಗಲೋಕದಲ್ಲಿ ನಿಂತ ಕೊಂಡೇ ಪ್ರಾಣಿಗಳಲ್ಲಿ) ಶೋಚಿರ್ನ=ಪ್ರಕಾಶವನ್ನೆಂಬಂತೆ ಮಾನಂ=ಜ್ಞಾನವನ್ನು ಪ್ರ ಅಸ್ಯಥ=(ಅಸುಕ್ಷೇಪೇ) ಚೆನ್ನಾಗಿ ಕಲ್ಪಿಸಿರುವಿರಿ (ಅಂದರೆ-ಸೂರ್ಯಾದಿಗಳು ಪ್ರಕಾಶವನ್ನು ಹೇಗೆ ದೂರದಿಂ ದಲೇ ಪ್ರಾಣಿಗಳಲ್ಲಿ ಹೊಂದಿಸಿಕೊಡುವರೋ, ಹೀಗೆಯೇ ಸತ್ಸಂಪ್ರದಾಯದಿಂದ ಬಂದಾಗ್ಯೂ ನೀಚರಲ್ಲಿರತಕ್ಕ ಜ್ಞಾನವನ್ನು ತಮ್ಮ ಜ್ಞಾನಕ್ಕಿಂತ ಅಲ್ಪವನ್ನಾಗಿ ಮಾಡಿರಿ.) ಏವಂಚ ಎಲೋ ಮರುತ್‌ಗಳೇ, ಅಥವಾ ಶ್ರೀವಿ ಷ್ಣುವೇ ಶ್ರೀವಿಷ್ಣುರೂಪ ವಿಶೇಷಗಳೇ ಸತ್ಸಂಪ್ರದಾಯದಿಂದ ಬಂದಿರುವ ನೀಚರಲ್ಲಿರುವ ಜ್ಞಾನವನ್ನು ತಮ್ಮ ಜ್ಞಾನಕ್ಕಿಂತ ಅಲ್ಪವನ್ನಾಗಿ ಮಾಡಿರಿ.) ಯತ್ ಇತ್ಥಾ=ಯಾವುದು ಯಾವುದು ಹೀಗೆಯೇ ಎಂದು ಪ್ರಮಿತ ವಾಗಿವೆಯೋ (ಅದು ಹಾಗೆಯೇ ಮರುತ್‌ಗಳಾದ ನಿಮಗೆ ಮಾಡಲ್ಪಟ್ಟಿದೆ. ಅಂದರೆ ಸಪ್ರಕಾರವಾದ ಕಾರ್ಯ

ಸಮುದಾಯವನ್ನು ನೀವೇ ನಿರ್ಮಿಸಿದ್ದು.) (ಹೀಗೆಯೇ ನೀವು ಜ್ಞಾನಪೂರ್ವಕವಾಗಿ ಎಲ್ಲಿಗಾದರೂ ಹೋಗು ವಿರೋ, ಯತ್ಕಿಂಚಿತ್ ಜ್ಞಾನವಿಷಯವನ್ನು ಮಾಡುತ್ತೀರೋ, ತಿಳಿಯುತ್ತೀರೋ, ಅದು) ಕಸ್ಯ=ಯಾರ ಅಧೀ ನವಾಗಿ, ಕ್ರತ್ವಾ=ಜ್ಞಾನಪೂರ್ವಕವಾಗಿ, (ಬಲಾತ್ಕಾರವಾಗಿ ಎಲ್ಲಿಗಾದರೂ ಹೋಗುವಿರೋ ಬಲವಿಷಯವನ್ನು ಮಾಡುವಿರೋ, ಅದು ಕಸ್ಯ=ಯಾರ ಅಧೀನವಾದ ವರ್ಪಸಾ=ಬಲದಿಂದ (ಸರ್ವಸ್ವಾತಂತ್ರ್ಯವಿದ್ದುದರಿಂದ ಜ್ಞಾನದಲ್ಲಿ ಬಲದಲ್ಲಿ ಆಗಲೀ ಪರಾಪೇಕ್ಷೆಯು ಇಲ್ಲ. ಮತ್ತೆ) ಕಂ=ಯತ್ಕಿಂಚಿತ್ ವಿಷಯವನ್ನು ಯಾಥ=ತಿಳಿ ಯುವಿರಿ.ಅದು (ಸ್ವಾಧೀನವಾದ ಜ್ಞಾನದಿಂದಲೇ, (ಯಾವುದು ಬಲಾತ್ಕಾರದಿಂದ) ಕಂ ಧೂತಯಃ=ನೀವು ಯಾರನ್ನಾದರೂ ನಡುಗಿಸುವಿರೋ, (ಅದು ತನ್ನ ಬಲದಿಂದಲೇ) ಹ=ಪ್ರಸಿದ್ಧ. ॥೧॥

ಭಾ॥ (೧) ಪರಾವತೋ ಹರೇಃ ಸ್ಥಾನಾತ್ ಜ್ಞಾನಂ ಶೋಚಿರಿವಾಸ್ಯಥ॥ (೨) ಸೂರ್ಯಾದಯೋ ಯಥಾ ಶೋಚಿರ್ದೂರಾದಸ್ಯಂತಿ ಜಂತುಷು॥ ಏವಂ ಜ್ಞಾನಂ ಸಂಪ್ರದಾಯಾನ್ಮ ರುತೋ ವಿಷ್ಣುರೇವ ವಾ॥(೩) ಇತ್ಥಂ ಯಥಾ ಸರ್ವದೃಶ್ಯಂ ತತ್ತಥಾ ಭವತಾಂ ಕೃತಂ॥ (೪) ಏವಂ ಯತ್ರ ಕ್ರತ್ವಾ ಜ್ಞಾನಾದ್ಬಲಾದ್ವಾ ಗಚ್ಛಥ ಕ್ವಚಿತ್॥ (೫) ಸ್ವತಂತ್ರತ್ವಾತ್ಪರಾಪೇಕ್ಷಾ ನ ಹಿ ವಃ ಕ್ವಚಿದಿಷ್ಯತೇ ॥ (೬) ಕಿಂಚಿದ್ಯಾಥ ಬಲಾತ್ಕಿಂಚಿದ್ಧೂನುಥ ಸ್ವಬಲಾದ್ಧಿ ತತ್ ॥೧॥

ಅ॥ (೧)ಎಲೋ ಮರುತುಗಳೇ ದೂರದಲ್ಲಿ ಅಂದರೆ ಶ್ರೀ ಹರಿಯ ಸ್ಥಾನದಲ್ಲಿ ಅಂದರೆ ತನ್ನ ಲೋಕದ ಲ್ಲಿದ್ದೇ ಪ್ರಾಣಿಗಳಲ್ಲಿ ಪ್ರಕಾಶವನ್ನೆಂಬಂತೆ. ಜ್ಞಾನವನ್ನು ಸಿರಾಸರಿಸಿ. (೨)(ಇದನ್ನೇ ವಿವರಿಸುತ್ತಾರೆ.) ಶ್ರೀ ವಿಷ್ಣುವೇ ಮುಖ್ಯ ವೃತ್ತಿಯಿಂದ ಈ ಮಂತ್ರ ಪ್ರತಿಪಾದ್ಯನು. ಸೂರ್ಯಾದಿಗಳು ಹೇಗೆ ಪ್ರಕಾಶವನ್ನು ದೂರ ದಿಂದಲೇ ಪ್ರಾಣಿಗಳಲ್ಲಿ ಇಡುತ್ತಾರೋ ಹೀಗೆಯೇ ಸಂಪ್ರದಾಯದಿಂದ ಬಂದಿರುವ ಜ್ಞಾನವನ್ನು ಮರುತ್ತುಗಳು ಶ್ರೀ ವಿಷ್ಣುವು ಅಥವಾ ಮರುನ್ನಾಮಕ ವಿಷ್ಣುರೂಪ ವಿಶೇಷವು ಪ್ರಾಣಿಗಳಲ್ಲಿ ಇಡುತ್ತಾರೆ. (೩) ಮತ್ತು ಯಾವುದು ಯಾವುದು ಸರ್ವರಿಂದಲೂ ದೃಶ್ಯವಾಗಿ ಪ್ರಕಾಶವಾಗಿದೆಯೋ, ಅದು ಹಾಗೆಯೇ ಮರುನ್ನಾಮಕ ರಾದ ನಿಮಗೇನೇ ಮಾಡಲ್ಪಟ್ಟಿದೆ. (ಅಂದರೆ ಧರ್ಮಾದಿಗಳಿಂದ ಕೂಡಿದ ಕಾರ್ಯ ಸಮುದಾಯವನ್ನು ನೀವೇ ಮಾಡಿದ್ದು) (೪) ಹೀಗೆಯೇ ಇತರವನ್ನು ಇಟ್ಟುಕೊಳ್ಳಬೇಕು. ಹೀಗೆಯೇ ಜ್ಞಾನಪೂರ್ವಕವಾಗಿ ಎಲ್ಲಿಗಾದರೂ ಹೋಗುವಿರೋ,ಯತ್ಕಿಂಚಿತ್ ಜ್ಞಾನವಿಷಯವನ್ನು ತಿಳಿಯುತ್ತೀರೋ,ಅದು ಯಾರ ಅಧೀನವಾದ ಜ್ಞಾನದಿಂದ ಯಾವುದಾದರೂ ಬಲಾತ್ಕಾರದಿಂದ ಎಲ್ಲಿಗಾದರೂ ಹೋಗುವಿರೋ(ಅಂದರೆ ಬಲ ವಿಷಯವನ್ನು ಮಾಡುತ್ತೀರೋ ಅದು ಯಾರ ಅಧೀನವಾದ ಬಲದಿಂದ (೫)(ಆಕ್ಷೇಪದ ತಾತ್ಪರ್ಯ ಹೇಳುತ್ತಾರೆ.) ಸರ್ವ ಸ್ವಾತಂತ್ರ್ಯವಿದ್ದುದ ರಿಂದ ಜ್ಞಾನದಲ್ಲಿಯೂ ಬಲದಲ್ಲಿಯೂ ಎಲ್ಲಿಯೂ ನಿಮಗೆ ಇತರಾಪೇಕ್ಷೆಯು ಇಲ್ಲವೇ ಇಲ್ಲ, (೬) ಯಾವುದನ್ನಾ ದರೂ ತಿಳಿಯುತ್ತೀರೋ ಅದು ಸ್ವಾಧೀನವೇ ಆದ ಜ್ಞಾನದಿಂದಲೇ ಯಾವುದನ್ನಾದರೂ ಬಲಾತ್ಕಾರದಿಂದ ನಡುಗಿಸುತ್ತೀರೋ ಅದು ಸ್ವಾಧೀನವೇ ಆದ ಬಲಾತ್ಕಾರದಿಂದಲೇ ॥ ೧ ॥

ಋ ॥ (೪೭೩) ಸ್ಥಿರಾ ವಃ ಸಂತ್ವಾಯುಧಾ ಪರಾಣುದೇ ವೀಳೂ ಉತ ಪ್ರತಿಷ್ಕಭೇ । ಯುಷ್ಮಾಕಮಸ್ತು ತವಿಷೀ ಪನೀಯಸೀ ಮಾ ಮರ್ತ್ಯಸ್ಯ ಮಾಯಿನಃ ॥ ೨ ॥

ಅ || (ಎಲೋ ಮರುತ್ತುಗಳೇ) ವಃ= ನಿಮಗೆ, ಪರಾಣುದೇ= ಈ ಜಗತ್ತಿನಲ್ಲಿ ಶತ್ರುಗಳನ್ನು ನಾಶಗೊಳಿಸುವುದಕ್ಕಾಗಿ ಉತ ಪ್ರತಿಷ್ಕಭೇ= (ಷ್ಕಭಿ ಸ್ಕಭಿ ಪ್ರತಿಬಂಧೇ) ಶತ್ರುಗಳನ್ನು ಸ್ತಂಭಿಸುವುದಕ್ಕಾಗಿಯೂ ಆಯುಧಾ= ಆಯುಧಗಳು ಸಂತು =ಇರುತ್ತವೆ. (ಕೇವಲ ಆಯುಧ ಮಾತ್ರವಲ್ಲ ಮತ್ತೆ ಆ ಆಯುಧಗಳು ಸ್ಥಿರಾ= ಸ್ಥಿರಗಳು. ವೀಳು= ಸದಾ ಸುದೃಢಗಳೇ ಆಗಿವೆ. (ಸ್ಥಿರ ಶಬ್ದವಾಚ್ಯವಾದ ದೀರ್ಘಕಾಲದಲ್ಲಿದ್ದುದರಿಂದಲೇ ವೀಳು ಶಬ್ದವಾಚ್ಯಗಳಾದ ದೃಢಗಳಾಗಿವೆ.) ಯುಷ್ಮಾಕಂ =ನಿಮಗೆ, ಪನೀಯಸೀ =(ಪಣ ವ್ಯವಹಾರೇ ಸ್ತುತೌಚ) ಸ್ತುತಿಯಿಂದ ಸದಾ ಉತ್ತಮವಾದ; ತವಿಷೀ = ತೇಜಸ್ಸು, ಅಥವಾ ಬಲವು, ಅಸ್ತು=ಇದೆ. ಮಾಯಿನಃ= (ಮಾಯಾ ದಂಭೇ ಕೃಪಾಯಾಂ ಚ. ದಂಭಸ್ತು ಕೈತವೇ ಕಲ್ಕೇ ಇತಿವಿಶ್ವಃ, ಮಾಯಾವಿಗಳಾದ ಕಪಟಿಗಳಾದ ದೈತ್ಯಾದಿಗಳಿಗೆ, ಪನೀಯಸೀ ತವಿಷೀ =ಉತ್ತಮವಾದ ಬಲವು ಅಥವಾ ಉತ್ತಮವಾದ ತೇಜಸ್ಸು, ಮಾ ಅಸ್ತು, ಇಲ್ಲ ಹಿ= ಪ್ರಸಿದ್ಧವು. (ಆದಕಾರಣ ನಮ್ಮ ತಪಸ್ಸಿಗೆ ವಿಘ್ನ ಮಾಡುವವರನ್ನು ಸಂಹರಿಸಿರಿ.) || ೨ ||

ಭಾ|| (೧) ಶತ್ರೂಣಾಮಪನೋದಾಯ ಸ್ತಂತು ವಸ್ತ್ವಾಯುಧಾನ್ಯಪಿ | ಸ್ತಂಭನಾಯ ಚ ಶತ್ರೂಣಾಂ ಸುದೃಢಾನ್ಯೇವ ತಾನ್ಯಸದಾ ||(೨)ಸ್ಥಿರತ್ವಂ ದೀರ್ಘಕಾಲತ್ವಂ ವೀಳುತ್ವಂ ದೃಢತಾ ತಥಾ || (೩) ಯುಷ್ಮಾಕಂ ತವಿಷೀ ತೇಜೋ ಬಲಮಸ್ತ್ವುತ್ತಮಂ ಸದಾ || (೪) ಮಾಯಿನೋ ನ ಹಿ ಮರ್ತ್ಯಸ್ಯ ಬಲಂ ತೇಜೋಽಥ ಚೋತ್ತಮಂ || ೨ ||

ಅ || ಮರುತ್ತುಗಳೇ ನಿಮಗೆ ಈ ಜಗತ್ತಿನಲ್ಲಿರತಕ್ಕ ಶತ್ರುಗಳನ್ನು ನಿರಾಕರಿಸುವುದಕ್ಕಾಗಿಯೂ ಶತ್ರುಗಳನ್ನು ಸ್ತಂಭಿಸುವುದಕ್ಕಾಗಿಯೂ ಆಯುಧಗಳು ಇರುತ್ತವೆ. (ಆಯುಧ ಮಾತ್ರವಲ್ಲ. ಮತ್ತೆ ಆ ಆಯುಧಗಳು) ಸುದೃಢಗಳಾಗಿಯೇ ಇವೆ. (೨) (ಸ್ಥಿರತ್ವ ಎಂದರೇನು? ಏನು ಭೇದವು? ಎಂದರೆ) ಸ್ಥಿರತ್ವವೆಂದರೆ ದೀರ್ಘಕಾಲದಲ್ಲಿರುವಿಕೆ. ವೀಳುತ್ವವೆಂದರೆ ದೃಢತೆ ಎಂದರ್ಥವು. (೩) ನಿಮಗೆ, ತವಿಷೀ= ತೇಜಸ್ಸು ಅಥವಾ ಸ್ತುತಿಯಿಂದ ಸದಾ ಅತ್ಯುತ್ತಮವಾದ ಬಲವಿದೆ. (೪) ಕಪಟಿಗಳಾದ ಮನುಷ್ಯರಾದ ದೈತ್ಯರುಗಳಿಗೆ ಬಲವು ಅಥವಾ ಉತ್ತಮವಾದ ತೇಜಸ್ಸಾಗಲೀ ಇಲ್ಲವೇ ಇಲ್ಲ. (ಮರುತ್ತುಗಳ ಮಾಹಾತ್ಮ್ಯವನ್ನು ಹೇಳುವ ಸಮಯದಲ್ಲಿ ದೈತ್ಯರುಗಳ ಬಲವನ್ನಾಗಲೀ ತೇಜಸ್ಸನ್ನಾಗಲೀ ನಿಷೇಧಿಸುವುದು ಅಸಂಗತವೆಂದರೆ) ನಮ್ಮ ತಪಸ್ಸಿಗೆ ವಿಘ್ನಕಾರಿಗಳಾದ ದೈತ್ಯಾದಿಗಳನ್ನು ಸಂಹರಿಸಿರಿ ಎಂದು ತಾತ್ಪರ್ಯವು. || ೨ ||

ಮು|| (೪೭೪)ಪರಾ ಹ ಯತ್ಸ್ಥಿರಂ ಹಥ ನರೋ ವರ್ತಯಥಾ ಗುರು |
ವಿ ಯಾಥನ ವನಿನಃ ಪೃಥಿವ್ಯಾ ವ್ಯಾಶಾಃ ಪರ್ವತಾನಾಂ || ೩ ||

ಅ || (ಎಲೋ ಮರುತ್ತುಗಳೇ, ನೀವು) ಯತ್ =ಯಾವುದು, ಸ್ಥಿರಂ= ದೀರ್ಘಕಾಲದಲ್ಲಿರತಕ್ಕ ಅಜ್ಞಾನಾದಿಯಾದ ಅಜ್ಞಾನ ಪಾಪಾದಿಗಳು ಇರುವುದೋ, ತತ್ =ಅವೆಲ್ಲವನ್ನೂ, ಭಕ್ತಾಯ= ನಿಮ್ಮ ಭಕ್ತನದ್ದನ್ನು, ಪರಾಹಥ= ವಿನಾಶಗೊಳಿಸಿರಿ. ಗುರು= ಅತ್ಯಂತ ಭಾರವಾದ, ನರಃ =ಮನುಷ್ಯರನ್ನು (ನಿಮ್ಮ ದಯೆಯಿಂದ ಚೆನ್ನಾಗಿ ಗುಣಗಳನ್ನು ಕೊಟ್ಟು) ವರ್ತಯಥ =ಇರಿಸುತ್ತೀರಿ. (ನೀವು) ವನಿನಃ= ಅರಣ್ಯ ಸಂಬಂಧಿಗಳಾದ, ತರೂನ್= ವೃಕ್ಷಗಳನ್ನು, (ಹಣ್ಣುಗಳಲ್ಲಿ) ಭಕ್ಷಿಸಲು ಯೋಗ್ಯವಾದ ದೇವತೆಗಳನ್ನು ಕುರಿತು, ವಿಯಾಥನ=ವಿಶೇಷವಾಗಿ ಹೋಗಿರಿ. ಪರ್ವತಾನಾಂ ಪೃಥಿವ್ಯಾಶ್ಚ= ಪರ್ವತಗಳ ಮತ್ತು ಪೃಥಿವಿಯ,ಆಶಾಃ= ದಿಕ್ಕುಗಳನ್ನೂ ಪ್ರದೇಶಗಳನ್ನೂ) ಸರ್ವಥಾ, ವಿಯಾಥನ =ಹೋಗಿರಿ. (ನಿಮಗೆ ಅಗಮ್ಯವಾದುದು ಯಾವುದೂ ಇಲ್ಲ. || ೩ ||

ಭಾ || (೧) ಸ್ಥಿರಂ ಚಾಜ್ಞಾನಪಾಪಾದಿ ಛದ್ಮಭಕ್ತಾದು ದುರಾಹಥ | (೨) ಗುರೂನಪಿ ನರಾನ್ನಿತ್ಯಂ ಗುಣೈರ್ವರ್ತಯಥಾಂಜಸಾ || (೩) ಪರ್ವತಾನಾಂ ಪೃಥಿವ್ಯಾಶ್ಚ ದಿಶೋ ನಿತ್ಯಂ ವಿಯಾಥನ | (೪) ವನಿನಶ್ಚ ತರೂನ್ ಸಮ್ಯಕ್ ಭಜನೀಯಾನ್ ಸುರಾನ್ ಹರಿಃ || ೩ ||

ಅ || ಸ್ಥಿರವಾದ ದೀರ್ಘಕಾಲಿಕವಾದ ಅನಾದಿ ಅಜ್ಞಾನ ಪಾಪಾದಿಗಳು ಇವೆಯೋ, ನಿಮ್ಮ ಭಕ್ತನ ಸಂಬಂಧಿಗಳಾದ ಅವುಗಳನ್ನು ವಿನಾಶಗೊಳಿಸಿರಿ. [೨] ಉತ್ತಮರಾದ ಮನುಷ್ಯರನ್ನು (ರಿಗೆ) ಚೆನ್ನಾಗಿ ಗುಣಗಳನ್ನು ಕೊಟ್ಟು ಇರಿಸುತ್ತೀರಿ. (ಪರ್ವತಗಳ ಮತ್ತು ಪೃಥಿವಿಯ ಭಾಗಗಳನ್ನು ನಿತ್ಯದಲ್ಲಿಯೂ, ವಿಶೇಷವಾಗಿ ಹೋಗಿರಿ. (ನಿಮಗೆ ಅಗಮ್ಯವಾದುದು ಯಾವುದೂ ಇಲ್ಲ.) (೪) ಅರಣ್ಯ ಸಂಬಂಧಿಗಳಾದ ವೃಕ್ಷಗಳನ್ನು ವಿಶೇಷವಾಗಿ ಹೊಂದಿರಿ. ಶ್ರೀಹರಿಯು ಚೆನ್ನಾಗಿ ಭಜಿಸುತ್ತಿರುವ ದೇವತೆಗಳನ್ನು ಹೊಂದುತ್ತಾನೆ. (ವಿಷ್ಣುಚಕ್ರದಲ್ಲಿ ಪೃಥಿವ್ಯಾಃ ಪರ್ವತಾನಾಂ ವ್ಯಾಶಾಃ ಎನ್ನುವುದಕ್ಕೆ ಏನರ್ಥವು ಎಂದರೆ) ಮಹೀ ದ್ಯೌಃ ಪೃಥಿವೀ ಚನ ಎಂಬ ಋಗ್ವ್ಯಾಖ್ಯಾನದಲ್ಲಿ ಪೃಥಿವೀ ಶಬ್ದವು ಭೂದೇವಿಪರವೆಂದೂ, ಯಂ ಕುಂಭಯಂತಿ ಪರ್ವತಾನ್ ಎಂಬಲ್ಲಿ ಪರ್ವತ ಶಬ್ದವು ಜನ್ಯಾಖ್ಯ ಪರ್ವವಿದ್ದುದರಿಂದ ಚೇತನಾರ್ಥಕವೆಂದೂ ವ್ಯಾಖ್ಯಾತವಾಗಿದೆ. ಪೃಥಿವೀ ಶಬ್ದವಾಚ್ಯವಾದ ಭೂದೇವಿಯು, ಪರ್ವತ ಶಬ್ದವಾಚ್ಯರಾದ ಸಮಸ್ತ ಜೀವರ ಆಶಾಃ= ಅಪೇಕ್ಷೆಗಳನ್ನು ಯಾಥನ= ಹೊಂದುತ್ತೀರಿ. || ೩ ||

ಋ || (೪೭೫) ನಹಿ ವಃ ಶತ್ರುರ್ವಿವಿದೇ ಅಧಿ ದ್ಯವಿ ನ ಭೂಮ್ಯಾಂ ರಿಶಾದಸಃ | ಯುಷ್ಮಾಕಮಸ್ತು ತವಿಷೀ ತನಾ ಯುಜಾ ರುದ್ರಾಸೋ ನೂ ಚಿದಾಧೃಷೇ || ೪ ||

ಅ || ಹೇ ರಿಶಾದಸಃ=(ರಿಶಃ=ಸುಖದಿಂದ, (ಸಾಧನ ವೇದವಲಾದುವುಗಳನ್ನು ಸಂಪಾದಿಸುವಿಕೆ, ಕೊಡಲಾದ ಆಯಾಸವಿಲ್ಲದೇನೇ) ತ=ಸುಖವನ್ನು, ಅದಂತಿ-ಅನುಭವಿಸುತ್ತಾರೆ, ಎಂಬ ವ್ಯುತ್ಪತ್ತಿಯಿಂದ) ಚೆನ್ನಾಗಿ ಸುಖವುಳ್ಳ ಎಲೋ ಮರುತ್‌ಗಳೇ, ವಃ=ನಿಮಗೆ, ದ್ಯವಿ=ಸ್ವರ್ಗದಲ್ಲಿ, ಶತ್ರುಃ=ನಾಶಕನು, ನ ಹಿ ಅಧಿ ವಿವಿದೇ=ಸರ್ವಥಾ ಹೊಂದಲ್ಪಡುವುದೇ ಇಲ್ಲ ಭೂಮ್ಯಾಂ=ಭೂಮಿಯಲ್ಲಿಯೂ, ನ ಅಧಿ ವಿವಿದೇ=(ವಿದ್ಲೃ ಲಾಭೇ) ಎಲ್ಲಿಯೂ ಸರ್ವಥಾ ಹೊಂದಲ್ಪಡುವುದೇ ಇಲ್ಲ. ಏಕೆಂದರೆ–ರುದ್ರಾಸಃ=ರೋಗ ಪರಿಹಾರಕರಾದ ಮರುತ್‌ಗಳೇ, ನಿಮಗೆ, ನು ಚಿತ್=ಈಗಲೂ ಕೂಡ ಸರ್ವದಾ, ಆ ಧೃಷೇ (ಆ ಇಾ ಪೂರ್ವಕಾತ್ ಞಿ ಧೃಷಾ ಪ್ರಾಗಲ್ಭ್ಯೇ) ಸಮಸ್ತ ದೈತ್ಯರ ಪರಾಭವವನ್ನು ಹೆಳೆಸುವುದಕ್ಕೋಸ್ಕರವೇ, ಅಂದರೆ ಸಮಸ್ತ ದೈತ್ಯರನ್ನೂ ನಾಶಗೊಳಿಸುವುದಕ್ಕಾಗಿಯೇ ತನಾ=ಸರ್ವತ್ರ ವ್ಯಾಪ್ತವಾದ, ಯುಜಾ=ನಿಶ್ಚಯವಾಗಿ ಆವಾವ ದೈತ್ಯರನ್ನು ನಾಶಮಾಡುವ ಉಪಾಯದಿಂದ ಕೂಡಿದ, ತವಿಷೀ=ಬಲವು, ಅಥವಾ ತೇಜಸ್ಸು, ಅಸ್ತು=ಇದೆ. ಹಿ=ಪ್ರಸಿದ್ಧವು. || ೪ ||

ಭಾ || (೧) ಭೂಮೌ ದಿವಿ ಚ ವಃ ಶತ್ರುಃ ಕ್ವಚಿನ್ನೈವ ಹಿ ಲಭ್ಯತೇ | (೨) ರಿಶಾದಸಃ ಸುಸುಖಿನಃ ಸುಖೇನ ಶಮದಂತಿ ಯತ್ (೩) ಬಲಂ ತೇಜೋಽಪಿ ವೋ ಹ್ಯಸ್ತಿ ವ್ಯಾಪ್ತಾ ನಿಶ್ಚಿತಯಾ ಯುಜಾ | ಅದ್ಯಾಪ್ಯಾಧರ್ಷಣಾಯೈವ ನಿಖಿಲಾಶುಭಸಂತತೇಃ || ೪ ||

ಅ ॥ ಭೂಮಿಯಲ್ಲಿಯೂ ಸ್ವರ್ಗಲೋಕದಲ್ಲಿಯೂ ಕೂಡ ನಿಮಗೆ ಶತ್ರುವು ಎಲ್ಲಿಯೂ ಹೊಂದಪ್ಪಡು ವುದೇ ಇಲ್ಲ. (೨) ಯಾವ ಕಾರಣದಿಂದ ಧನಾರ್ಜನಾದ್ಯಾಯಾಸವಿಲ್ಲದೇನೇ ಸುಖವನ್ನು ಅನುಭವಿಸುತ್ತಾರೋ ಅದ ಕಾರಣ ರಿಶಾದಸಃ=ಹೆಚ್ಚಾಗಿ ಸುಖವುಳ್ಳವರು (೩) ಈಗಲೂ ಸರ್ವಕಾಲದಲ್ಲೂ ಸಮಸ್ತ ಅಶುಭಗಳ ಸಮು ದಾಯವನ್ನು ಕಳೆಯುವುದಕ್ಕಾಗಿ ಅಂದರೆ ಸಮಸ್ತ ದೈತ್ಯರನ್ನು ನಾಶಗೊಳಿಸುವುದಕ್ಕಾಗಿ ಕ್ಷಿಪ್ರವಾಗಿ ಆಯಾಯ ದೈತ್ಯರನ್ನು ನಾಶಮಾಡಲು ಯೋಗ್ಯವಾದ ಉಪಾಯದಿಂದ ಕೂಡಿದ ವ್ಯಾಪ್ತವಾದ ಬಹಳವಾದ ಬಲವೂ ತೇಜಸ್ಸಾಗಲೀ ಇದೆ. ಪ್ರಸಿದ್ಧ ॥ ೪ ॥

ಋ ॥ (೪೭೬) ಪ್ರ ವೇಪಯಂತಿ ಪರ್ವತಾನ್ ವಿ ವಿಂಚಂತಿ ವನಸ್ಪತೀನ್ ।
ಪ್ರೋ ಆರತ ಮರುತೋ ದುರ್ಮದಾ ಇವ ದೇವಾಸಃ ಸರ್ವಯಾ
ವಿಶಾ ॥ ೫ ॥ ೧೮ ॥

ಅ॥ ಮರುತಃ=ಮರುದ್ದೇವತೆಗಳು, ಪರ್ವತಾನ್ =ಪರ್ವತಗಳನ್ನು, ಪ್ರವೇಪಯಂತಿ = (ವೇಪೃಕಂಪನೇ.) ನಡುಗಿಸುತ್ತಾರೆ. ವನಸ್ಪತೀನ್= ವೃಕ್ಷಗಳನ್ನು. ವಿವಿಂಚಂತಿ= (ರಿಚಿರ್ ಪೃಥಗ್ಭಾವೇ. ಬುಡ ಸಮೇತ ಕಿತ್ತು)ಹಾಕುತ್ತಾರೆ.ಮರುತಃ=ಮರುತ್ ದೇವತೆಗಳು, ಸರ್ವಯಾವಿಶಾ=ಸಮಸ್ತ ಪ್ರಜೆಗಳಿಂದ ಕೂಡಿಯೇ,ಪ್ರೋ ಆರತ= (ಋಗತಿ ಪ್ರಾಪಣಯೋಃ) ಸಂಬದ್ಧರಾದರು. (ಸಮಸ್ತ ಪ್ರಜೆಗಳಲ್ಲಿ ಸನ್ನಿಹಿತರಾದರು.) ದುರ್ಮದಾ ಇವ= ಮದೋನ್ಮತ್ತರಂತೆ ತಮ್ಮ ಪ್ರಯೋಜನಾನುಸಂಧಾನ ವಿರಹಿತರಾಗಿಯೇ (ಮನುಷ್ಯರನ್ನು ಶುಭ ಅಶುಭ ಗಳನ್ನು ಮಾಡುವ ವಿಷಯದಲ್ಲಿ ಪ್ರೇರೇಪಿಸುತ್ತಾರೆ.) (ವಿಷ್ಣು ಪಕ್ಷದಲ್ಲಿ ಪರ್ವತಾನ್ =ಜೀವರನ್ನು, ಪ್ರವೇಪಯಂತಿ =ಚೆನ್ನಾಗಿ ಪ್ರೇರೇಪಿಸುತ್ತಾರೆ. ವನಸ್ಪತೀನ್ = ಭಜಿಸಿಕೊಳ್ಳಲು ಯೋಗ್ಯರಾದ ಇಂದ್ರಾ ದಿಗಳಿಗೆ ಅಧಿಪತಿಗಳಾದ ಬ್ರಹ್ಮಾದಿ ದೇವತೆಗಳನ್ನು ಫಲವನ್ನು ಕೊಡೋಣದರಿಂದ ತಾರತಮ್ಯಾನು ಸಾರವಾಗಿ ಪೃಥಕ್ಕರಿಸುತ್ತಾರೆ) ॥ ೫ ॥ ೧೮ ॥

ಭಾ॥ (೧) ಪ್ರವೇಪಯಂತಿ ಪರ್ವತಾನ್ ವಿವಿಂಚಂತಿ ವನಸ್ಪತೀನ್ (೨) ಜನಿಪರ್ವ
ವತೋ ಜೀವಾನ್ ಸಂಪ್ರೇರಯತಿ ಕೇಶವಃ॥ (೩) ಭಜನೀಯಪತೀನ್ ಬ್ರಹ್ಮ
ಪೂರ್ವಾಂಶ್ಚ ಫಲದಾನತಃ। ತಾರತಮ್ಯೇನ ನಸ್ಯಕ್ಷ ವಿವೇಚಯತಿ ಸರ್ವದಾ।
(೪)ಸರ್ವಪ್ರಜಾಸ್ವತಿಷ್ಠಂತ ಪ್ರಸಕ್ತಾಸ್ತಾಭಿಃ ಸ್ವೈವಹಿ॥(೫)ಮತ್ತಾ ಇವ ಪ್ರೇರಯಂತಿ
ಶುಭಾಶುಭಕೃತೌ ನರಾನ್॥ ॥ ೫ ॥ ೧೮ ॥

ಆ॥ (೧) (ಮರುತ್‌ಗಳು) ಪರ್ವತಗಳನ್ನು ಚೆನ್ನಾಗಿ ನಡುಗಿಸುತ್ತಾರೆ. ವೃಕ್ಷಗಳನ್ನು ಮೂಲ ಸಮೇತ ಕಿತ್ತು ಬಿಸಾಡುತ್ತವೆ. (೨) ಶ್ರೀ ಕೇಶವನು ಜನನ ರೂಪ ಪರ್ವಗಳುಳ್ಳ ಜೀವರನ್ನು ಚೆನ್ನಾಗಿ ಪ್ರೇರೇಪಿಸುತ್ತಾನೆ, (೩) ಭಜಿಸಿಕೊಳ್ಳಲು ಯೋಗ್ಯರಾದ ಗರುಡ ಶೇಷ ರುದ್ರಾದಿಗಳಿಗೆ ಅಧಿಪತಿಗಳಾದ ಬ್ರಹ್ಮಾದಿ ದೇವತೆಗಳಿಗೆ ಸರ್ವದಾ ಫಲವನ್ನು ದಾನ ಮಾಡುತ್ತಾ ತಾರತಮ್ಯಾನುಸಾರವಾಗಿ ಪೃಥಕ್ಕರಿಸುತ್ತಾನೆ. (೪) ಆ ಪ್ರಜೆಗಳಿಂದ ಕೂಡಿಕೊಂಡೇ ಸಂಬದ್ಧರಾದವರಾದರು. ಅಂದರೆ ಸಮಸ್ತಪ್ರಜೆಗಳಲ್ಲಿ ಸನ್ನಿಹಿತರಾಗಿದ್ದರು. (೫) ಮದೋನ್ಮತ್ತರಾದವರಂತೆ ತಮಗೆ ಪ್ರಯೋಜನಾನುಸಂಧಾನರಹಿತರಾದವರಾಗಿಯೇ ಶುಭ ಅಶುಭ ಕರ್ಮಗಳನ್ನು ಮಾಡುವ ವಿಷಯದಲ್ಲಿ ಮನುಷ್ಯರನ್ನು ಪ್ರೇರೇಪಿಸುತ್ತಾರೆ. ॥ ೫ ॥

ಋ ॥ (೪೭೭) ಉಪೋ ರಥೇಷು ಪೃಷತೀರಯುಗ್ಧ್ವಂ ಪ್ರಷ್ಟಿರ್ವಹತಿ ರೋಹಿತಃ। ಆವೋ ಯಾಮಾಯ ಪೃಥಿವೀ ಚಿದಶ್ರೋದಬೀಭಯಂತ ಮಾನುಷಾಃ ॥ ೬ ॥

ಅ ॥ (ಎಲೋ ಮರುತ್‌ಗಳೇ) ರಥೇಷು=ರಥಗಳಲ್ಲಿ, ಪೃಷತೀಃ=ಹೆಣ್ಣು ಜಿಂಕೆಗಳನ್ನು, ಉಪೋ ಅಯುಗ್ಧ್ವಂ=ಕೂಡಿಸಿರುತ್ತೀರಿ. (ಸಂಬಂಧಿಸಿರುತ್ತೀರಿ)(ರೋಹಿತಶ್ಚ=ಜಿಂಕೆಯು, ಪ್ರಷ್ಟಿಃ=ಪೃಷ್ಠವನ್ನು ವಹತಿ=ಹೊರುತ್ತದೆ. (ಅಂದರೆ ಜಿಂಕೆಯನ್ನು ರಥದಲ್ಲಿ ಪೃಷ್ಠಭಾಗದಲ್ಲಿ (ಹಿಂದುಗಡೆ) ಕೂಡಿಸಿರುತ್ತೀರಿ) ಆಗ, ವಃ=ನಿಮಗೆ, ಯಾಮಾಯ=ಗಮನವನ್ನು ಕುರಿತು, (ಗಮನವನ್ನು ಸಹಿಸುವುದಕ್ಕಾಗಿ) ಪೃಥಿವೀ ಚಿತ್=ಧರಾ ದೇವಿಯೂ ಕೂಡ, ದಾರ್ಢ್ಯಾಯ=ದೃಢವಾಗಿ ನಿಲ್ಲುವುದಕ್ಕಾಗಿ, ಆ ಅಶ್ರೋತ್=ಪುನಃ ಅತಿಶಯವಾಗಿ (ತನಗೆ ಆಧಾರಭೂತನಾದ ಶೇಷ ದೇವನನ್ನು) ಆಶ್ರಯಿಸಿತು. ಮಾನುಷಾಃ=ಮನುಷ್ಯರೂ ಕೂಡ, ಅಭೀಭಯಂತ=(ಅಭೀಭಯೇ) ಭಯವನ್ನು ಹೊಂದಿದರು ॥ ೬ ॥

ಭಾ ॥ (೧) ಅಯುಜಿಧ್ವಂ ಪೃಷತೀಶ್ಚೈವ ರೋಹಿತಂ ಪೃಷ್ಠಕೋ ರಥೇ (೨) ವೋ ಯಾಮಂ ಪ್ರತಿದಾರ್ಢ್ಯಾಯ ಶೇಷಮಶ್ರೇತ್ಪ್ರವರ್ಧರಾ । (೩) ಭೀತಿಮಾಪುರ್ಮಾನುಷಾಶ್ಚ ॥ ೬ ॥

ಅ ॥ ರಥದಲ್ಲಿ ಹೆಣ್ಣು ಜಿಂಕೆಗಳನ್ನೂ ಪೃಷ್ಠ ಭಾಗದಲ್ಲಿ ಜಿಂಕೆಯನ್ನೂ (ಸಂಬಂಧಿಸಿರಿ.) ಕೂಡಿಸಿರಿ- (೨) ಧರಾದೇವಿಯೂ ಕೂಡ ನಿಮ್ಮ ಗಮನವನ್ನು ಸಹಿಸುವುದಕ್ಕಾಗಿ ಅತಿಶಯವಾಗಿ ಭೂಮಿಗೆ ಆಧಾರಭೂತನಾದ ಶೇಷ ದೇವನನ್ನು ಆಶ್ರಯಿಸಿದಳು. (೩) ಮನುಷ್ಯರೂ ಕೂಡ ಭಯವನ್ನು ಹೊಂದಿದರು. ॥ ೬ ॥

ಋ ॥ (೪೭೮) ಆ ವೋ ಮಕ್ಷೂ ತನಾಯ ಕಂ ರುದ್ರಾ ಅವೋ ವೃಣೀಮಹೇ। ಗಂತಾ ನೂನಂ ನೋಽವಸಾ ಯಥಾ ಪುರೇತ್ಥಾ ಕಣ್ವಾಯ ಬಿಭ್ಯುಷೇ ॥ ೭ ॥

ಅ ॥ ರುದ್ರಾಃ=ರೋಗಪರಿಹಾರಕರಾದ ಮರುತ್‌ಗಳೇ, (ನಾವು) ವಃ=ನಿಮ್ಮ ಸಕಾಶದಿಂದ, ಕಂ=ಸುಖದ, ತನಾಯ=ಪ್ರಾಪ್ತಿಗಾಗಿ, ಮಕ್ಷು=ಶೀಘ್ರದಲ್ಲಿ, ವಃ=ನಿಮ್ಮ ಅವಃ=ರಕ್ಷಣೆಯನ್ನು ಆ ವೃಣೀಮಹೇ=ಪ್ರಾರ್ಥಿಸುತ್ತೇವೆ. ಆದ ಕಾರಣ ಹೇಗೆ, ಪುರಾ=ಪೂರ್ವ ಕಾಲದಲ್ಲಿ ಬಿಭ್ಯುಷೇ=ಭಯದಿಂದ ಕೂಡಿದ, ಕಣ್ವಾಯ=ಕಣ್ವನಾದ ನನಗೋಸ್ಕರ, (ಹೋಗುವವರಾಗಿ) ಇತ್ಥಾ=ಹಾಗೆಯೇ, ನೂನಂ=ನಿಶ್ಚಯವಾಗಿ ಈಗಲೂ ಕೂಡ, ನಃ=ನಮ್ಮನ್ನು ಕುರಿತು, ಅವಸಾ=ರಕ್ಷಣವನ್ನು ಮಾಡುವವರಾಗಿಯೇ ಗಂತ=ಬನ್ನಿರಿ. ॥ ೭ ॥

ಭಾ ॥ (೧) ಕ್ಷಿಪ್ರಂ ವಃ ಪ್ರಾಪ್ತಯೇ ಸುಖಂ ॥ ರಕ್ಷಾಂ ವೃಣೀಮಹೇ ಯುಷ್ಮದ್ಗಂತಾಽದ್ಯಾ (೨) ಪಿ ಚ ನೋಽವಸಾ ॥ ಭೀತಿಯುಕ್ತಾಯ ಕಣ್ವಾಯ ಮಹ್ಯಂ ॥ ೭ ॥

ಅ॥ (೧) ನಿಮ್ಮ ಸಕಾಶದಿಂದ, ಸುಖದ ಪ್ರಾಪ್ತಿಗಾಗಿ, ಶೀಘ್ರವಾಗಿ, ನಿಮ್ಮ ರಕ್ಷಣೆಯನ್ನು ಪ್ರಾರ್ಥಿಸುತ್ತೇವೆ (೨) (ಆದಕಾರಣ ಪೂರ್ವದಲ್ಲಿ) ಭಯದಿಂದ ಕೂಡಿರುವ ಕಣ್ವನಾದ ನನಗೋಸ್ಕರ, ಈಗಲೂ ಕೂಡ ನಮ್ಮನ್ನು ಕುರಿತು ರಕ್ಷಣೆಯನ್ನು ಮಾಡುವವರಾಗಿಯೇ ಬನ್ನಿರಿ. ॥ ೭ ॥

ಋ (೪೭೯) ಯುಷ್ಮೇಷಿತೋ ಮರುತೋ ಮರ್ತ್ಯೇಷಿತ ಆ ಯೋ ನೋ ಅಭ್ವ ಈಷತೇ। ವಿ ತಂ ಯುಯೋತ ಶವಸಾ ವ್ಯೋಜಸಾ ವಿ ಯುಷ್ಮಾಕಾಭಿರೂತಿಭಿಃ ॥ ॥ ೮ ॥

ಅ॥ ಮರುತಃ=ಎಲೈ ಮರುತ್‌ಗಳೇ, ಯಃ=ಯಾವ ದುರಾತ್ಮನು, ಯುಷ್ಮೇಷಿತಃ=(ಉಪಗತಾ. ನೀವು ಸರ್ವಕರ್ಮ ನಿಯಂತೃಗಳಾಗಿರುವುದರಿಂದ ಮುಖ್ಯವಾಗಿ ನಿಮ್ಮಿಂದಲೇ ಪ್ರೇರೇಪಿಸಲ್ಪಟ್ಟಿರುವವನೋ ಅಥವಾ ಮರ್ತ್ಯೇಷಿತಃ=ಬಾಹ್ಯದೃಷ್ಟಿಯಿಂದ ಮನುಷ್ಯರಾದ ರಾಜಾದಿಗಳಿಂದ ಪ್ರೇರೇಪಿಸಲ್ಪಟ್ಟವನಾಗಿ, ನಃ=ನಮಗೆ ಅಭ್ವಃ=ಐಶ್ವರ್ಯಾರ್ಥಾವಗಳನ್ನು ಆ ಈಷತೇ=ಚೆನ್ನಾಗಿ ಇಚ್ಛಿಸುತ್ತಾನೋ, ತಂ=ಅಂತಹನನ್ನು (ನೀವು) ಶವಸಾ= ಸುಖದಿಂದ, ವಿಯುಯೋತ=ಓಡಿಸಿರಿ. ಬಿಡಿಸಿರಿ (ದುಃಖಿಸುವನ್ನಾಗಿ ಮಾಡಿರಿ.) ಓಜಸಾ= ಬಲದಿಂದಲೂ ವಿಯುಯೋತ=ಬಿಡಿಸಿರಿ. ಹಾಗೆಯೇ, ಯುಷ್ಮಾಕಾಭಿಃ ಊತಿಭಿಃ=ನಿಮ್ಮದಾದ ಅಭಿಪ್ರಾಯಗಳಿಂದಲೂ, ವಿಯುಯೋತ=(ಯುಯು ವಿಯೋಗೇ) ಬಿಡಿಸಿರಿ. (ಉಪದ್ರವರಹಿತನನ್ನಾಗಿ ಮಾಡಿರಿ. ॥ ೮ ॥

ಭಾ॥ [೧] ಯುಷ್ಮಾಭಿರೇವಚ॥ ಪ್ರೇರಿತೋऽಥ ನಿಯಂತೃತ್ವಾದ್ಯುಷ್ಮಾಕಂ (೨) ಮಾನುಷೇಣ ವಾ। ಬಾಹ್ಯದೃಷ್ಟ್ಯಾ ತ್ವಭೂತೀನರ್ಘೇ ಯ ಇಚ್ಛತಿ (೩) ತಮೋಜಸಾ ಬಲೇನ ಚ ದ್ರಾವಯತ ಯುಷ್ಮದೀಯೋತಿಭಿಸ್ತಥಾ ॥ ೮ ।

ಅ॥ (೧) ಯಾವ ದುರಾತ್ಮನು ನೀವು ಸಮಸ್ತಕರ್ಮ ನಿಯಾಮಕರಾಗಿರುವುದರಿಂದ ಮುಖ್ಯವಾಗಿ ನಿಮ್ಮಿಂದಲೇ ಪ್ರೇರೇಪಿಸಲ್ಪಟ್ಟಿರುವವನೋ, (೨) ಅಥವಾ ಬಾಹ್ಯದೃಷ್ಟಿಯಿಂದ ರಾಜಾದಿಮನುಷ್ಯರಿಂದ ಪ್ರೇರಿತನಾಗಿ ನಮಗೆ ಐಶ್ವರ್ಯಾರ್ಥಾವವನ್ನು ಚೆನ್ನಾಗಿ ಇಚ್ಛಿಸುತ್ತಾನೋ (೩) ಅತನನ್ನು ನೀವು ಪ್ರಕಾಶದಿಂದಲೂ ಬಲದಿಂದಲೂ ಹಾಗೆಯೇ ನಿಮ್ಮದಾದ ಅಭಿಪ್ರಾಯಗಳಿಂದಲೂ ಓಡಿಸಿರಿ ॥ ೮ ॥

ಋ (೪೮೦) ಅಸಾಮಿ ಹಿ ಪ್ರಯಜ್ಯವಃ ಕಣ್ವಂ ದದ ಪ್ರಚೇತಸಃ। ಅಸಾಮಿಭಿರ್ಮರುತ ಆ ನ ಊತಿಭಿರ್ಗಂತಾ ವೃಷ್ಟಿಂ ನ ವಿದ್ಯುತಃ ॥ ೯ ॥

ಅ॥ ಪ್ರಯಜ್ಯವಃ=ಚೆನ್ನಾಗಿ ಯಾಗಗಳಿಂದ ಪೂಜಿಸಲ್ಪಡುವ ಪ್ರಚೇತಸಃ=ಪ್ರಕೃಷ್ಟ ಚಿತ್ತವುಳ್ಳ ಮರುತಃ= ಮರುತ್‌ಗಳೇ, (ನೀವು) ಕಣ್ವಂ=ಕಣ್ವನಾದ ನನಗೋಸ್ಕರ ಅಸಾಮಿ=ಅಸದೃಶವಾದ, ಅನಲ್ಪವಾದ ಹಿ (ಅಭೀಷ್ಟಿತಂ) ಇಷ್ಟವಾದುದನ್ನೇ, ದದ=(ದದದಾನೇ) ಕೊಡಿರಿ. ಮತ್ತು ಅಸಾಮಿಭಿಃ=ಅಸದೃಶಗಳಾದ, ಊತಿಭಿಃ=ಅಭಿಪ್ರಾಯಗಳಿಂದ, (ನಮ್ಮನ್ನು ರಕ್ಷಿಸುವ ವಿಷಯದಲ್ಲಿ ಅಸದೃಶ ಅಭಿಪ್ರಾಯವುಳ್ಳ ನೀವು) ವಿದ್ಯುತಃ=ಮಿಂಚುಗಳು, ವೃಷ್ಟಿಂ ನ=ಮಳೆಯನ್ನೆಂತಲೆ, (ಶೀಘ್ರವಾಗಿ) ನಃ=ನಮ್ಮನ್ನು ನಮ್ಮ ರಕ್ಷಣಾದಿಗಳಿಗಾಗಿ ಶೀಘ್ರದಲ್ಲಿ) ಆ ಗಂತ=ಬನ್ನಿರಿ. ॥ ೯ ॥

ಋ॥ (೪೮೧) ಅಸಾಮ್ಯೋಜೋ ಬಿಭೃಥಾ ಸುದಾನವೋಽಸಾಮಿ ಧೂತಯಃ ಶವಃ। ಋಷಿದ್ವಿಷೇ ಮರುತಃ ಪರಿಮನ್ಯವ ಇಷುಂ ನ ಸೃಜತ ದ್ವಿಷಂ

॥ ೧೦ ॥

ಅ॥ ಸುದಾನವಃ=ಚೆನ್ನಾಗಿ ದಾನವಮಾಡುವ ಸ್ವಭಾವವುಳ್ಳ, ಧೂತಯಃ=ಶತ್ರುಗಳನ್ನು ನಡುಗಿಸುತ್ತಿರುವ ಮರುತಃ=ಮರುತ್‌ಗಳೇ (ನೀವು) ಅಸಾಮಿ=ಅಸದೃಶವಾದ ಓಜಃ=ಬಲವನ್ನೂ ಬಿಭೃಥಃ=(ಯುದ್ಧ ಇಧಾರಣ ಪೋಷಣೆಯೋ) ಧರಿಸಿರುವಿರಿ. ಅಸಾಮಿ ಶವಃ=ಅಸದೃಶವಾದ ಸುಖವನ್ನೂ ಕೂಡ, ಬಿಭೃಥ=ಧರಿಸಿರುವಿರಿ. (ಆದಕಾರಣ) ಪರಿಮನ್ಯವೇ=ಕೋಪವನ್ನು ಹೊಂದಿದ ಋಷಿದ್ವಿಷೇ=ಋಷಿಗೆ ದ್ವೇಷಿಯಾದವನನ್ನು ಕೊಲ್ಲುವುದಕ್ಕಾಗಿ ಇಷುಂ ನ=ಬಾಣವನ್ನೆಂಬಂತೆ ದ್ವಿಷಂ=ವೈರಿಗೆ ಪ್ರತಿವಿರೋಧಿಗಳಾದ ದೇವಾದಿಗಳನ್ನು ಸೃಜತ=ಸೃಷ್ಟಿಸಿರಿ ॥ ೧೦ ॥ ೧೯ ॥ ೭ ॥

ಭಾ॥ (೧) ಓಜೋ ಸಮಂ ಬಿಭೃಥ ಚ ಮಖೇಜ್ಯಾಃ ಸಮಮುತ್ತಮಂ। ಸುದಾನಶೀಲಾಃ ಕಲ್ಯಾಯ ದತ್ತಾ ಸಮಮಭೀಪ್ಸಿತಂ ॥ (೨) ಅಸಮ್ಯೈರ್ನೋಽಭಿಪ್ರಾಯೈರ್ಗಣಂತ ವೃಷ್ಟಿಂ ನ ವಿದ್ಯುತಃ ॥ ೯ ॥ ೧೦ ॥ ೧೯ ॥ ೭ ॥

ಅ॥ (೧) ಯಾಗಗಳಿಂದ ಪೂಜಿಸಲ್ಪಡತಕ್ಕ ಒಳ್ಳೇದಾನ ಮಾಡುವ ಸ್ವಭಾವವುಳ್ಳ ಮರುತ್‌ಗಳೇ ಅಸದೃಶವಾದ ಅನುತ್ತಮವಾದ ಬಲಾದಿಗಳನ್ನು ಧರಿಸಿರುತ್ತೀರಿ.(ಅಸಮಶಬ್ದವು ಸಮಾಭಾವವನ್ನು ಹೇಳುತ್ತದೆ. ಉತ್ತಮಾಭಾವವೆಂದು ಹೇಗೆ ಸಿಗುತ್ತದೆ ಎಂದರೆ) ಸಮವೆಂದರೆ ಉತ್ತಮವು.(ಅಂದರೆ ಸಮಶಬ್ದವು ಉತ್ತಮಕ್ಕೂ ಉಪಲಕ್ಷಕವು. ಕಲ್ಯಾಣವಾದ ನನಗೋಸ್ಕರ ಅಸದೃಶವಾದ ಇಷ್ಟವನ್ನು ಕೊಡಿರಿ. (೨) (ಅಸದೃಶ ಅಭಿಪ್ರಾಯಗಳಿಂದ ಅಂದರೆ ನಮ್ಮನ್ನು ರಕ್ಷಿಸುವ ವಿಷಯದಲ್ಲಿ ಅನುತ್ತಮ ಅಭಿಪ್ರಾಯಗಳುಳ್ಳ ನೀವು) ಮಿಂಚುಗಳು ವೃಷ್ಟಿಯನ್ನೆಂಬಂತೆ ನಮ್ಮನ್ನು ಹೊಂದಿರಿ. ॥ ೧೦ ॥ ೧೯ ॥ ೭ ॥

ವಿ॥ ಈ ೨ ಋಕ್ಕುಗಳಿಗೆ ಒಟ್ಟಿಗೆ ವ್ಯಾಖ್ಯಾನ ಮಾಡಲಿಕ್ಕೆ ಪ್ರಯೋಜನವೇನೆಂದರೆ ಅಸಾಮ್ಯೋಜಃ ಎಂಬ ಋಕ್ಕಿನಲ್ಲಿ ಸುದಾನವ ಎಂಬ ವಿಶೇಷಣಕ್ಕೂ ಶವೋಬಿಭೃಥ ಎನ್ನುವುದಕ್ಕೂ ಪ್ರಯೋಜನವಿಲ್ಲದಿರುವುದರಿಂದ ದ ಎನ್ನುವುದರಿಂದ ಅನ್ವಯವೆಂದು ತಿಳಿಸುವುದಕ್ಕಾಗಿ ಮಾತ್ರವಾಗಿ (ಒಟ್ಟಿಗೆ) ವ್ಯಾಖ್ಯಾನ ಮಾಡಿದ್ದು. ತಥಾಚ ಯಕಾರಣದಿಂದ ನೀವು ದಾನಸ್ವಭಾವವುಳ್ಳವರೋ ಮಹಾಸುಖವುಳ್ಳವರೋ ಆದ ಕಾರಣ ಕೊಡಿರಿ. ಎಂದು ಭಾವವು. ॥ ೯ ॥ ೧೦ ॥ ೧೯ ॥ ೩೯ ॥ ೭ ॥

ಅವ ॥ ಉತ್ತಿಷ್ಠ ಇತ್ಯಾದಿಗಳು ೮ ಋಕ್ಕುಗಳುಳ್ಳದ್ದು. ಪಾವಮಾನಗಳು. ಬ್ರಹ್ಮಣಸ್ಪತ್ಯಾದಿಗಳು ದೇವತೆಗಳು. ಪ್ರಗಾಥಾ ಛಂದಸ್ಸು ಕಣ್ವನೇ ಋಷಿಯು. ೪೦ ನೇ ಸೂಕ್ತವು.

ಋ॥ (೪೮೨) ಉತ್ತಿಷ್ಠ ಬ್ರಹ್ಮಣಸ್ಪತೇ ದೇವಯಂತಸ್ತ್ವೇಮಹೇ। ಉಪ ಪ್ರಯಂತು ಮರುತಃ ಸುದಾನವ ಇಂದ್ರ ಪ್ರಾಶೂರ್ಭವಾ ಸಚಾ

॥ ೧ ॥

ಅ॥ ಹೇ ಬ್ರಹ್ಮಣಸ್ಪತೇ=ಚತುರ್ಮುಖನಿಗೆ ಅಧಿಪತಿಯಾದ ಶ್ರೀ ವಿಷ್ಣುವೇ, ಭಾರತೀಪತಿಯಾದ ಶ್ರೀ ವಾಯುವೇ, ಉತ್ತಿಷ್ಠ=(ನಮ್ಮ ಸವಿಸಾಪಕ್ಕೆ ಬರುವುದಕ್ಕಾಗಿ) ಎದ್ದು ನಿಲ್ಲು. ದೇವಯಂತಃ=(ದಿವು ಕ್ರೀಡಾ ವಿಜಿಗೀಷಾ ವ್ಯವಹಾರ ದ್ಯುತಿ ಸ್ತುತಿ ಮೋದ ಮದ ಸ್ವಪ್ನ ಕಾಂತಿ ಗತಿಷು ವ್ಯವಹಾರ ಶಬ್ದದಿಂದ ಪೂಜಾ ರೂಪ ವ್ಯವಹಾರವನ್ನು ಇಟ್ಟುಕೊಳ್ಳಬೇಕು) ಪೂಜಿಸುವ್ವ ಸ್ತುತಿಯನ್ನಾಗಲೀ ಮಾಡುತ್ತಿರುವ, ನಾವು, ಯಾವ ಕಾರಣದಿಂದ ತ್ವಾ=ನಿನ್ನನ್ನು, ಈಮಹೇ=(ಈ ಇ ಗತೌ) ಶರಣು ಹೊಂದುತ್ತೇವೋ, (ಆದ ಕಾರಣ ಸುದಾನವಃ ಮರುತಃ=ಒಳ್ಳೇ ದಾನ ಮಾಡುವ ಸ್ವಭಾವವುಳ್ಳ, ಮರುತ್ತುಗಳೇ ನಮ್ಮನ್ನು, ಉಪ ಪ್ರಯಂತು=ಬನ್ನಿರಿ. ಇಂದ್ರ=ಇಂದ್ರನೇ ನೀವು, ಸಚಾ=ಸುಖದಿಂದಲೇ, (ನಮ್ಮ ಯಜ್ಞವನ್ನು, ಪ್ರಾಶೂರ್ಭವ=(ಪ್ರಕರ್ಷೇಣ ಅಶ್ನಾತೀತಿ ಪ್ರಾಶೂಃ ಅತಿಭೋಜನೇ.) ಚೆನ್ನಾಗಿ ಭೋಜನ ಮಾಡಿದವನು ಆಗು. ॥ ೧ ॥

ಭಾ (೧) ದೇವಯಂತಃ ಪೂಜಯಂತಃ ಸ್ತುವಂತೋ ಽ (೨) ಕಿಳ್ಪತಾಶನಃ। ಪ್ರಾಶೂಃ ॥ ೧ ॥

ಅ ॥ (೧) ದೇವಯಂತಃ= ಪೂಜಿಸುತ್ತಿರುವ, ಅಥವಾ ಸ್ತುತಿಸುತ್ತಿರುವ ನಾವು. (೨) ಪ್ರಾಶೂಃ=ಅತಿಶಯವಾಗಿ, ಕೃಶಂ=ಮಾಡಲ್ಪಟ್ಟ ಅಶನಂ=ಭೋಜನಂ ಅನೇನ ಎಂಬ ವ್ಯುತ್ಪತ್ತಿಯಿಂದ,) ಅತಿಶಯವಾಗಿ ಭೋಜನ ಮಾಡಿದವನು ಪ್ರಾಶೂಃ ಎನಿಸುತ್ತಾನೆ. ॥ ೧ ॥

ಋ ॥ (೪೮೩) ತ್ವಾಮಿದ್ಧಿ ಸಹಸಸ್ಪುತ್ರ ಮರ್ತ್ಯ ಉಪಬ್ರೂತೇ ಧನೇ ಹಿತೇ।
ಸುವೀರ್ಯಂ ಮರುತ ಆ ಸ್ವಶ್ವ್ಯಂ ದಧೀತ ಯೋ ವ ಆಚಕೇ ॥ ೨ ॥

ಅ ॥ (ಎನೇ ಈ ಋಕ್ಕಿಗೆ ಸಹಸಸ್ಪುತ್ರರು ಮರುತ್ತುಗಳೂ ಕೂಡ ದೇವತೆಗಳು) ಹೇಸಹಸಃ ಪುತ್ರ=ವಾಯು ದೇವರಿಂದ ಅಭಿವ್ಯಂಗ್ಯನಾದ ಪ್ರಯುಕ್ತ, ವಾಯುವಿನ ಪುತ್ರನೆನಿಸಿಕೊಂಡ ಶ್ರೀ ವಿಷ್ಣುವೇ ಅಥವಾ ವಾಯುವಿನಿಂದ ಹುಟ್ಟಿರುವ ಪ್ರಯುಕ್ತ ವಾಯು ಪುತ್ರನಾದ ಇಂದ್ರನೇ, ಯಃ ಮರ್ತ್ಯಃ=ಯಾವ ಮನುಷ್ಯನು ತ್ವಾ ಮಿತ್=ನಿನ್ನನ್ನೇ, ಹೇ ಮರುತಃ=ಎಲೋ ವಾಯುಗಳೇ, ವಃ=ನಿಮ್ಮನು ಕೂಡ. ಹಿತೇ ಧನೇ=ಯುದ್ಧ ವಿಷಯವಲ್ಲಿ, ಅಥವಾ ನಿಹಿತವಾದ ಅಂದರೆ ನಿಧಿ ರೂಪವಾದ ಧನ ವಿಷಯದಲ್ಲಿ ಆದರೂ, ಉಪಬ್ರೂತೇ=ಉತ್ಕಂಠವಾಗಿ ಸ್ತುತಿಸುತ್ತಾನೋ, ಆಚಕೇ=(ಚಕ ತೃಪ್ತೌ) ನೋಡಿರುವನೋ, ಸಃ=ಅವನು, ಸುವೀರ್ಯಂ=ಬಹು ವೀರ್ಯವತ್ತಾದ, ಸ್ವಶ್ವ್ಯಂ=(ಶೋಭನಾಶ್ಚತೇ ಅಶ್ವಾಶ್ಚ ಸ್ವಶ್ವಾಃ=ಇಂದ್ರಿಯಗಳು. ತೇಷಾಂ ಇದಂ ಸ್ವಶ್ವ್ಯಂ) ಜ್ಞಾನ ಮೊದಲಾದುದನ್ನು, ಆದಧೀತ=ಧರಿಸಿರುವನು. ಹೊಂದಿರುವನು. ಹಿ=ಪ್ರಸಿದ್ಧವು. ॥ ೨ ॥

ಭಾ ॥ (೧) ವಾಯೋಃ ಸುತೇತ್ಯೇವ ಸಹಸಸ್ಪುತ್ರ ಇತ್ಯಥ ॥ (೨) ತದ್ವ್ಯಂಗ್ಯತ್ವಾದ್ಧರಿಃ ಪ್ರೋಕ್ತಃ ಶಕ್ರಸ್ತತ್ಸುತ ಏವಚ ॥ (೩) ಯುದ್ಧಂ ಹಿತಧನಂ ಪ್ರೋಕ್ತಂ ನಿಹಿತಂ ಧನಮೇವ ವಾ ॥(೪) ಸ್ವಶ್ವ್ಯಂತು ಸ್ವಿಂದ್ರಿಯ ಫಲಮಾಚಕೇ ಪಶ್ಯದಿತ್ಯಪಿ ॥ ೨ ॥

ಅ ॥ (೧) ಸಹಸಸ್ಪುತ್ರ ಎನ್ನುವುದಕ್ಕೆ ವಾಯುವಿನ ಮಗನು ಎಂದೇ ಸಾಮಾನ್ಯತಃ ಅರ್ಥವು (ಶ್ರುತಿಯಲ್ಲಿ ಸಹಸಸ್ಪುತ್ರ ಎಂದು ಸಂಬುದ್ಧ್ಯಂತವಾದುದಕ್ಕೆ ಭಾಷ್ಯದಲ್ಲಿ ಸಹಸಃ ಪುತ್ರಃ ಎಂದು ಸಂಧಿಯಿಲ್ಲದೆ ಪ್ರಯೋಗವು ಹೇಗೆಂದರೆ ವಿವಕ್ಷಿತವಾದ ಸಂಧಿಯು ಆಗುತ್ತದೆ, ಎಂದು ವೈಯಾಕರಣ ವ್ಯವಹಾರದಿಂದ ಪುತ್ರಃ ಎಂದು ಸಂಧಿಯಿಲ್ಲದೆ ನಿರ್ದೇಶ ಮಾಡಿದ್ದು. ಹಾಗಾದರೆ ಸಹಃ ಶಬ್ದಕ್ಕೆ ವಾಯು ಎಂಬ ಅರ್ಥವು ಹೇಗೆ ಎಂದರೆ- ಸಹಃ ಶಬ್ದಕ್ಕೆ ಬಲನಾಮಗಳಲ್ಲಿ ಪಾಠವಿದೆ. ವಾಯು ಶಬ್ದವು. ಬಳಿಷ್ಠೋತ್ಯಾದಿಗಳಲ್ಲಿ ಬಲ

ಜ್ಞಾನಾರ್ಥಕವೆಂದು ವ್ಯಾಖ್ಯಾತವಾಗಿದೆ, ಆದಕಾರಣ ಏಕದೇಶಕ್ಕೆ ವಿಶಿಷ್ಟ ಲಕ್ಷಣೆಯಿಂದ ವಾಯುವೆಂದ ರ್ಥವು. ಸಿದ್ಧವಾಗಿದೆ ಎಂಬ ಅಭಿಪ್ರಾಯದಿಂದ ಸುತೇಕ್ಷ್ಮೇವ ಎಂಬಲ್ಲಿ ಏವ ಶಬ್ದವು.) (೨)(ಶಾಸಾನ್ಯಸಃ ವ್ಯಾಖ್ಯಾನ ಮಾಡಿ ವಿಶೇಷತಃ ವ್ಯಾಖ್ಯಾನವನ್ನು ತೋರಿಸುತ್ತಾರೆ.) ಸಹಸಸ್ಪುತ್ರ ಎನ್ನುವುದಕ್ಕೆ ವಾಯು ಪುತ್ರನು ಶ್ರೀಹರಿಯು ಎಂದು ಅರ್ಥವಿವಕ್ಷಿತವಾದರೆ) ಶ್ರೀಹರಿಯು ರುದ್ರಾದಿಗಳಿಗೆ ವಾಯುದೇವರ ಉಪದೇಶದಿಂದ ವ್ಯಕ್ತನಾಗುವುದರಿಂದ ಶ್ರೀಹರಿಯು ವಾಯುವಿನ ಪುತ್ರನೆಂದು ಹೇಳಲ್ಪಡುತ್ತಾನೆ. ದೇವೇಂದ್ರನು ವಾಯುವಿನಿಂದ ಹುಟ್ಟಿರುವುದರಿಂದ ವಾಯುಪುತ್ರನೇ ಆಗಿರುತ್ತಾನೆ (ಅಲ್ಲಿ ಔಪಚಾರಿಕ ಪ್ರಯೋಗವೆಂದು ಹೇಳಬೇಕಾಗಿಲ್ಲ. (೩)(ಧನೇಹಿತೇ ಎನ್ನುವುದರ ಅರ್ಥಹೇಳುತ್ತಾರೆ.) ಯುದ್ಧವು ಹಿತಧನವೆಂದು ಹೇಳಲ್ಪಡುತ್ತದೆ. (ಆಜೌ ಪ್ರಧನೇ ಎಂದು ಸಂಗ್ರಾಮದ ನಾಮಗಳಲ್ಲಿ ಪಠಿತವಾದ ಪ್ರಯುಕ್ತ ನಿಘಂಟುಸಿದ್ಧವೆಂದು ಅಭಿಪ್ರಾಯ. ಅಥವಾ ನಿಹಿತಂ= ನಿಧಿರೂಪವಾದ ಧನವೇ ಹಿತಧನವೆನಿಸುತ್ತದೆ. (೪) (ಸ್ವಶ್ವ್ಯಂ ಎನ್ನುವುದನ್ನು ವ್ಯಾಖ್ಯಾನ ಮಾಡುತ್ತಾರೆ.) ಶೋಭನಗಳಾದ ಅಶ್ವರೂಪಗಳಾದ ಇಂದ್ರಿಯಗಳ ಫಲವಾದ ಜ್ಞಾನಾದಿಗಳನ್ನು ಆ ಚಕೇ= (ಚಕಶೃಪ್ತೌ ಎಂಬುವುದು ಧಾತುಗಳಿಗೆ ಅನೇಕಾರ್ಥಗಳಿರುವುದರಿಂದ ದರ್ಶನಾರ್ಥದಲ್ಲಿಯೂ ಇದೆ.) ಕಂಡನು. ॥ ೨ ॥

ಋಗ್॥ (೪೮೪) ಪ್ರೈತು ಬ್ರಹ್ಮಣಸ್ಪತಿಃ ಪ್ರದೇವ್ಯೇತು ಸೂನೃತಾ। ಅಚ್ಛಾ ವೀರಂ ನರ್ಯಂ ಪಙ್ಕ್ತಿರಾಧಸಂ ದೇವಾ ಯಜ್ಞಂ ನಯಂತು ನಃ ॥ ३ ॥

ಅ॥ (ಈ ಋಕ್ಕಿಗೆ ಬ್ರಹ್ಮಣಸ್ಪತಿಯು ಸೂನೃತಾ ದೇವಿಯು, ಮತ್ತು ದೇವತೆಗಳೂ ದೇವತೆಗಳು-) ಬ್ರಹ್ಮಣಸ್ಪತಿಃ=ಶ್ರೀ ವಿಷ್ಣುವು, ಅಥವಾ ವಾಯುವು, ಪ್ರ ಏತು=ನಮ್ಮಕಾರ್ಯಗಳಲ್ಲಿ ಮುಂದಾಗಿ ಹೋಗಲಿ, ಅಂದರೆ ಮುಖ್ಯ ಸಾಧಕನು ಆಗಲಿ. ಸೂನೃತಾ= (ಸೂನೃತಂ ಮಂಗಲೇ ಸತ್ಯೇ ಪ್ರಿಯ ವಾಚಿಚ ಸೂನೃತಂ ಇತಿವಿಶ್ವಃ) ಪ್ರಿಯ ವಚನಕ್ಕೆ ಅಭಿಮಾನಿನಿಯಾದ, ದೇವೀ= ಸರಸ್ವತೀದೇವಿಯು, ಅಥವಾ ವಿಷ್ಣು ಸಂಬಂಧಿನಿಯಾದ ಅಜ್ಞಾರೂಪವಾದ ವಚನವು, ಪ್ರಏತು= ಮುಂದುಗಡೆ ಹೋಗಲಿ. ದೇವಾಃ= ಇತರ ಸಮಸ್ತ ದೇವತೆಗಳೂ ಕೂಡಾ ನಃ= ನಮ್ಮದ್ದಾದ, ಯಜ್ಞಂ ಯಾಗವನ್ನು ವೀರಂ= (ವೀರಸ್ತು ಸುಭಟೇ ಶ್ರೇಷ್ಠೇ ಇತಿ ವಿಶ್ವಃ) ಶ್ರೇಷ್ಠವಾದ, ನರ್ಯಂ= (ನ ರೀಯತೇ ನ ಕ್ಷೀಯತೇ ಇತಿ ನರ್ಯಂ) ಕ್ಷಯ (ನಾಶ) ರಹಿತನಾದ, ಪಙ್ಕ್ತಿರಾಧಸಂ= (ಪಙ್ಕ್ತಿ ವಿಂಶತಿ ತ್ರಿಂಶಚ್ಚತ್ವಾರಿಂಶತ್, ಇತ್ಯಾದಿ ನಿಪಾತ ಮಾಡಿರುವುದರಿಂದ ಪಙ್ಕ್ತಿ ಶಬ್ದವು ಪಂಚನ್ ಪರ್ಯಾಯವು.) ಪಂಚ ವಿಧವಾದ ದೇವ ಗಂಧರ್ವ ನೃ ಪಿತೃದೈತ್ಯರೂಪರಾದ ಜನ ರನ್ನು (ರಾಧಯತಿ) ಸೃಷ್ಟಿ ಸ್ಥಿತ್ಯಾದಿಗಳಿಂದ ಅಭಿವೃದ್ಧಿ ಗೊಳಿಸುವ ಶ್ರೀ ಹರಿಯನ್ನು, ಅಚ್ಛ= ಕುರಿತು, ನಯಂತು= ಹೊಂದಿಸಲಿ. ॥ ३ ॥

ಭಾ॥ (೧) ಪತಿಸ್ತು ಬ್ರಹ್ಮಣೋ ವಿಷ್ಣುರ್ವಾಗೀಶತ್ವಾತ್ಸಮಾರಣಃ॥ (೨)ಅಗ್ರತೋ ಯಾತ್ವಸಾ ವಸ್ಮತ್ಕಾರ್ಯೇಷ್ವೇವಂ ಸರಸ್ವತೀ॥ ಸೂನೃತಾ ವೈಷ್ಣವೀ ವಾಗ್ವಾ [೩] ಯಜ್ಞಂ ವೀರಂ ಪರಂ ಪ್ರತಿನಯಂತು। ದೇವಾಃ ಸರ್ವೇऽಪಿ [೪] ಯತ್ಪಂಚಜನವರ್ಧನಃ। ಪಂಙ್ಕ್ತಿರಾಧಾ ಹವಿಸ್ತೇನ [೫] ವೀರೋ ನರ್ಯಸ್ಸ ಏವಚ॥ [೬] ದೇವ ಗಂಧರ್ವ ನೃ ಪಿತೃ ದೈತ್ಯಾಃ ಪಂಚಜನಾಭಿಧಾಃ॥ ॥ ३ ॥

ಅ॥ (೧) (ಬ್ರಹ್ಮಣಸ್ಪತಿ ಶಬ್ದಾರ್ಥವನ್ನು ಪುನಃ ಸ್ಮೃತಿಪಥಕ್ಕೆ ತರಿಸುತಾರೆ.) ಶ್ರೀ ವಿಷ್ಣುವು ಚತುರ್ಮುಖನಿಗೆ ಅಧಿಪತಿಯಾದುದರಿಂದ ಬ್ರಹ್ಮಣಸ್ಪತಿಯೆನಿಸುತ್ತಾನೆ ಹಾಗೆಯೇ ವಾಯುದೇವರೂ ಭಾರತಿಗೆ ಪತಿಯಾಗಿ ಪಿಯಾಮುಕರಾದುದರಿಂದ ಬ್ರಹ್ಮಣಸ್ಪತಿಯೆನಿಸುತ್ತಾರೆ. (೨) (ಈಗ ಋಕ್ಕನ್ನು ವ್ಯಾಖ್ಯಾನ ಮಾಡುತ್ತಾರೆ.) ಈ ವಿಷ್ಣು ವಾಯುಗಳು ನಮ್ಮ ಕಾರ್ಯಗಳಲ್ಲಿ ಮುಖ್ಯಸಾಧಕರಾಗಲಿ. ಹಾಗೆ ಯೇ ಪ್ರಿಯವಚನಕ್ಕೆ ಅಭಿಮಾನಿನಿಯಾದ ಸರಸ್ವತಿಯೂ ಅಥವಾ ವಿಷ್ಣು ಸಂಬಂಧಿಯಾದ ಜ್ಞಾ ರೂಪವಚನವೂ ಮುಖ್ಯ ಸಾಧಕವಾಗಲಿ. (೩) ಇತರ ಸಮಸ್ತದೇವತೆಗಳೂ ನಮ್ಮ ಯಜ್ಞವನ್ನು ಸರ್ವ ಶ್ರೇಷ್ಠನೂ ನಾಶವಿರಹಿತನೂ ಆದ ಶ್ರೀ ಹರಿಯನ್ನು ಕುರಿತು ಹೊಂದಿಸಲಿ (೪) ಯಾವ ಕಾರಣದಿಂದ ಶ್ರೀಹ ರಿಯು ದೇವಾದಿ ಐದು ವಿಧ ಜನರನ್ನು ಸೃಷ್ಟಿಸ್ಥಿತ್ಯಾದಿಗಳಿಂದ ಅಭಿವೃದ್ಧಿಗೊಳಿಸುವನೋ, ಅದುದರಿಂದ ಶ್ರೀ ಹರಿಯು ಪಂಚ್ರರಾಧಾಃ ( ಪಂಚ್ರಂರಾಧಯತೀತಿ ಎಂಬ ವ್ಯುತ್ಪತ್ತಿಯಿಂದ) ದೇವಾದಿಗಳಿಗೆ ಸೃಷ್ಟಿಸ್ಥಿತ್ಯಾ ದಿಗಳನ್ನು ಮಾಡುವವನೆನಿಸುತ್ತಾನೆ. (೫) ಆ ಶ್ರೀ ಹರಿಯೇ ವೀರಃ= ಸರ್ವಶ್ರೇಷ್ಠನೆಂದೂ ನರ್ಯಃ= ನಾಲ್ಕು ವಿಧ ನಾಶರಹಿತನೆಂದೂ ಹೇಳಿಸಿಕೊಳ್ಳಲ್ಪಡುತ್ತಾನೆ. (೬) (ಪಂಚ ಜನರು ಯಾರೆಂದರೆ) ದೇವತೆಗಳು, ಗಂಧರ್ವರು, ನರರು, ಪಿತೃ ದೇವತೆಗಳು ದೈತ್ಯರು ಎಂದು ಪಂಚ ಜನರೆಂದು ಹೆಸರುಳ್ಳವರು ॥ ೩ ॥

ಋ (೪೮೫) ಯೋ ವಾಘತೇ ದದಾತಿ ಸೂನರಂ ವಸು ಸ ಧತ್ತೇ ಅಕ್ಷಿತಿ ಶ್ರವಃ । ತಸ್ಮಾ ಇಳಾಂ ಸುವೀರಾಮಾ ಯಜಾಮಹೇ ಸುಪ್ರತೂರ್ತಿ ಮನೇಹಸಂ । ೪ ॥

ಅ ॥ (ಈ ನಾಲ್ಕನೇ ಋಕ್ಕಿಗೂ ಐದನೇ ಋಕ್ಕಿಗೂ ಬ್ರಹ್ಮಣ ಸ್ಪತಿಯು ದೇವತೆಯು.) ಯಃ= ಯಾವ ಶ್ರೀ ವಿಷ್ಣುವು, ವಾಘತೆ(=ಸ್ತೋತ್ರಮಾಡುವ ಭಕ್ತನಿಗೋಸ್ಕರ, ಸೂನರಂ ವಸು =(ಸುಷ್ಠುಭರ್ತಿ ನರಃಯೇನ ಎಂಬ ವ್ಯುತ್ಪತ್ತಿಯಿಂದ) ಒಳ್ಳೇ ಜ್ಞಾನವನ್ನು, ದದಾತಿ= ಕೊಡುತ್ತಾನೋ. ಸಃ= ಆ ಶ್ರೀ ವಿಷ್ಣುವು, ಅಕ್ಷಿತಿಶ್ರವಃ= ವಿನಾಶವಿಲ್ಲದಿರುವ (ಶಾಶ್ವತವಾದ) ಕೀರ್ತಿಯನ್ನು ಧತ್ತೆ(= ಧರಿಸುತ್ತಾನೆ. ಅಂದರೆ ಶ್ರೀ ಹರಿಯು ಅಕ್ಷಯ ಕೀರ್ತಿಯನ್ನು ಧರಿಸುತ್ತಾನೋ, ತಸ್ಮೈ=ಅಂತಹ ಶ್ರೀ ವಿಷ್ಣುವಿಗೋಸ್ಕರ, ಸುವೀ ರಾಂ=ಶೋಭನವಾದ ವೀರ್ಯವುಳ್ಳ, (ಒಳ್ಳೇವೀರ್ಯವನ್ನುಂಟುಮಾಡುವ) ಸುಪ್ರತೂರ್ತಿಂ=(ಪ್ರ.ಪೂ ರ್ವಾತ್ ತುರ್ವೀ ಹಿಂಸಾಯಾಂ, ಪ್ರತೂರ್ತಿ ಶಬ್ದಃ ರೂಢ ನಾಮಸು ಪಠಿತಃ) ಒಳ್ಳೇ ರೋಗವನ್ನು ಮಾಡುವ(ಅಥವಾ ತೂರೀ ಗತಿತ್ವರಣ ಹಿಂಸಯೋಃ) ವೇಗವನ್ನುಂಟು ಮಾಡುವ, ಅನೇಹಸಂ= (ಅನಾಃನಾಂ ಈಹಾ ಯಸ್ಯಾಃ ಎಂಬ ವ್ಯುತ್ಪತ್ತಿಯಿಂದ) ಇಂದ್ರಿಯಗಳಿಗೆ ವಿಶೇಷತಃ ಚೇಷ್ಟೆಯನ್ನುಂಟು ಮಾಡುವ, ಇಳಾಂ=ಅನ್ನವನ್ನು (ಹವಿಸ್ಸನ್ನು) ಆಯಜಾಮಹೇ=ಕೊಡುತ್ತೇವೆ. ॥ ೪ ॥

ಭಾ ॥ (೧) ವಾಘತೇ ಸ್ತುವತೇ ವಿಷ್ಣುರ್ದದಾತಿ ಸೂನರಂ ವಸು ॥ (೨) ಸುಷ್ಠು ಯೇನ ಹರೋ ಭೂಯತಾತ್ಸೂನರಂ ಜ್ಞಾನಮುಚ್ಯತೇ ॥ (೩) ಸ ಧತ್ತೇ ಚಾಕ್ಷಯಾಂ ಕೀರ್ತಿಮಿಳಾಮನ್ನಂ ಯಜಾಮಹೇ ॥ (೪) ಸುವೀರ್ಯಾತ್ವಾತ್ಸುವೀರಂ ತತ್ಸು ಪ್ರತೂರ್ತಿಃ ಸುವೇಗಕೃತ್ । ಪ್ರಾಣಚೇಷ್ಟಾ ನಿಮಿತ್ತತ್ವಾತ್ತದನೇಹ ಇತೀರಿತಂ ॥ ೪ ॥

ಅ ॥ (೧) ಶ್ರೀ ವಿಷ್ಣುವು, ವಾಘತೆ(=ಸ್ತುತಿಸುವ ಭಕ್ತನಿಗೋಸ್ಕರ, ಸೂನರಂವಸುವನ್ನು ಕೊಡುತ್ತಾನೆ.) (೨) (ಸೂನರವೆಂದರೆ ಯಾವುದು ಹೇಗೆ ಎಂದರೆ) ಮನುಷ್ಯನು ಯಾವುದರಿಂದ ಚೆನ್ನಾಗಿ ಯೋಗ್ಯನು ಆಗು

ತ್ತಾನೋ ಅಂತಹ ಪ್ರಶಸ್ತ ಜ್ಞಾನವು ಸಂವರ್ಧಿಸುತ್ತದೆ. (೩) ಯಾವ ವಿಷ್ಣುವು ಸ್ತುತಿಸುವವರಿಗೆ ದ್ರವ್ಯ ವನ್ನು ಕೊಡುತ್ತಾನೋ, ಅವನು ಅಕ್ಷಯಕೀರ್ತಿಯನ್ನು ಹೊಂದುತ್ತಾನೆ. ಯಾವನು ಅಕ್ಷಯಕೀರ್ತಿ ಯನ್ನು ಹೊಂದುತ್ತಾನೋ, ಅವನಿಗೆ ಇಳಾಂ=ಅನ್ನವನ್ನು ಕೊಡುತ್ತೇವೆ (೪) (ಅನ್ನದಲ್ಲಿ ಸುವೀರಾದಿ ಶಬ್ದಗಳನ್ನು ವ್ಯಾಖ್ಯಾನ ಮಾಡುತ್ತಾರೆ) ಅನ್ನವು ಒಳ್ಳೇ ವೀರ್ಯವನ್ನುಂಟು ಮಾಡುವುದರಿಂದ ಸುವೀರ ವೆನ್ನಿಸುತ್ತದೆ. ಒಳ್ಳೇಗೂಡವನ್ನುಂಟುಮಾಡುವುದರಿಂದ ಸುಪ್ರತೂರ್ತಿಃ ಎನಿಸುತ್ತದೆ. ಇಂದ್ರಿಯಗಳ ಜೀವೃಗೆ ನಿಮಿತ್ತ ಕಾರಣವಾದುದರಿಂದ ಆ ಅನ್ನವು ಅನೇಹಃ ಎನಿಸುತ್ತದೆ. ॥ ೪ ॥

**ಋ ॥ (೪೮೬) ಪ್ರನೂನಂ ಬ್ರಹ್ಮಣಸ್ಪತಿರ್ಮಂತ್ರಂ ವದತ್ಯುಕ್ಥ್ಯಂ । ಯಸ್ಮಿ ನ್ನಿಂದ್ರೋ ವರುಣೋ ಮಿತ್ರೋ ಅರ್ಯಮಾ ದೇವಾ ಓಕಾಂಸಿ ಚಕ್ರಿರೇ ॥ ೫ ॥ ೨೦ ॥**

ಅ ॥ ಬ್ರಹ್ಮಣಸ್ಪತಿಃ=ಆ ಶ್ರೀ ವಿಷ್ಣುವೇ, ಯಸ್ಮಿನ್ ಮಂತ್ರೇ=ಯಾವ ಮಂತ್ರದಲ್ಲಿ, ಇಂದ್ರಃ= ಇಂದ್ರನು, ವರುಣಃ=ವರುಣನು, ಮಿತ್ರಃ=ಮಿತ್ರಾಖ್ಯ ಸೂರ್ಯನು, ಅರ್ಯಮಾ=ಸೂರ್ಯನು ಇತರ ದೇವತೆ ಗಳೂ ಕೂಡ ಓಕಾಂಸಿ=ಮನೆಗಳನ್ನು,ಚಕ್ರಿರೇ=ಮಾಡಿರುವರೋ(ಪ್ರತಿಪಾದ್ಯರಾಗಿರುತ್ತಾರೋ ಅಂದರೆ ಅಮುಖ್ಯ ವಾಗಿ ಇಂದ್ರಾದಿ ದೇವತೆಗಳು ವಾಚ್ಯರಾಗಿರುತ್ತಾರೋ,) ಅಂತಹ, ಉಕ್ಥ್ಯಂ= (ಉತ್ಪೂರ್ವಕಾತ್ ಸ್ಥಾಧಾತೋ ನಿಷ್ಪತ್ತಿ ಸರ್ವರಿಗೂ ಉತ್ಪಾದಕನಾಗಿರುವುದರಿಂದ ಉಕ್ಥಃ= ಉಕ್ಥನೆನಿಸಿದ ಶ್ರೀ ವಿಷ್ಣುವು) ಶ್ರೀ ವಿಷ್ಣು ವಿಷಯಕವಾದ ಮಂತ್ರಂ= ಮಂತ್ರವನ್ನು ನೂನಂ ನಿಶ್ಚಿತ ಹೇಗೆ ಆದೀತೋ ಹಾಗೆ, ಪ್ರವದತಿ= ಹೇಳು ವನು. (ಅಂದರೆ ಸಮಸ್ತವೇದಗಳಿಗೆ ಪ್ರವರ್ತಕನೂ ಮುಖ್ಯತಃ ವಾಚ್ಯನೂ ಶ್ರೀ ವಿಷ್ಣುವೇ) ॥ ೫ ॥

ಭಾ ॥ (೧) ಸ ಏವ ಭಗವಾನ್ ವಿಷ್ಣುರ್ಮಂತ್ರಂ ತದ್ವಿಷಯಂ ವದೇತ್ ॥ (೨) ಉಕ್ಥ ಮುತ್ಥಾಪಕತ್ವೇನ ಸ ಏವ ಭಗವಾನ್ ಹರಿಃ ॥ (೩) ತನ್ಮಂತ್ರವಾಚ್ಯಾ ದೇವಾಶ್ಚ ॥ ೫ ॥ ೨೦ ॥

ಅ ॥ (೧) ಷಡ್ಗುಣೈಶ್ವರ್ಯ ಸಂಪನ್ನನಾದ ವಿಷ್ಣುವೇ ಮಂತ್ರವನ್ನು ವಿಷ್ಣು ವಿಷಯಕವನ್ನಾಗಿ ಹೇಳುತ್ತಾನೆ. (೨) (ಯಾವುದು ಉಕ್ಥವು ಹೇಗೆ ಎಂದರೆ) ಆ ಶ್ರೀಹರಿಯೇ ಸರ್ವವಸ್ತುವಿಗೂ ಉತ್ಪಾದಕ ನಾದುದರಿಂದ ಉಕ್ಥನೆನಿಸುತ್ತಾನೆ. (೩) ಇಂದ್ರಾದಿ ದೇವತೆಗಳು ಕೂಡ ಭಗವದ್ವಿಷಯಕವಾದ ಮಂತ್ರಕ್ಕೂ ಅಮುಖ್ಯವಾಗಿ ವಾಚ್ಯರು ಆಗುತ್ತಾರೆ. ( ಸಕಲ ವೇದಗಳಿಗೂ ಮುಖ್ಯತಃ ಪ್ರವರ್ತಕನೂ ವಾಚ್ಯನೂ ಆ ಶ್ರೀ ಹರಿಯೇ ) ॥ ೫ ॥

**ಋ ॥ (೪೮೭) ತಮಿದ್ವೋಚೇಮಾ ವಿದಥೇಷು ಶಂಭುವಂ ಮಂತ್ರಂ ದೇವಾ ಅನೇಹಸಂ । ಇಮಾಂ ಚ ವಾಚಂ ಪ್ರತಿಹರ್ಯಥಾ ನರೋ ವಿಶ್ವೇದ್ವಾಮಾ ವೋ ಅಶ್ನವತ್ ॥ ೬ ॥**

ಅ ॥ (೬. ೭ ನೇ ಋಕ್ಕುಗಳಿಗೆ ದೇವತೆಗಳೇ ಜೀವತೆಗಳು.) ದೇವಾಃ=ದೇವತೆಗಳಿರಾ, ವಯಂ=ನಾವು, ತವಿಶ್=(ಇಂದ್ರಾದಿದೇವತೆಗಳು ಯಾವ ಮಂತ್ರಕ್ಕೆ ಅಮುಖ್ಯವಾಗಿ ವಾಚ್ಯರಿಂದು ಹೇಳಲ್ಪಟ್ಟರು ತ್ತಾರೋ,) ಅಂತಹ, ಶಂಭುವಂ=(ಶಂಭವತ್ಯಸ್ಮಾದಿತಿ, ಅಥವಾ ಶಂ=ಸುಖವು ಯಸ್ಮಾದ್ಭವತಿ ಎಂಬ ವ್ಯುತ್ಪತ್ತಿಯಿಂದ) ಸುಖ ಕಾರಣನಾದ, ಅನೇಹಸಂ=ಇಂದ್ರಿಯಗಳ ಪ್ರವೃತ್ತಿಗೆ ಕಾರಣವಾದ, ಮಂತ್ರಂ=ಮಂತ್ರವನ್ನು ವಿದಥೇಷು=(ವಿದಜ್ಞಾನೇ ಅಥ ಆ ಕೃತ್ಯಯವು) ಜ್ಞಾನಕ್ಕಾಗಿ, ವೋಚೇಮ=(ವಚಪರಿಭಾಷಣೇ.) ಜಪಿಸುತ್ತೇವೆ. ನರಃ = ಎಲೋದೇವತೆಗಳೇ, (ನಿಮ್ಮ ಮಂತ್ರವನ್ನು ಜಪಿಸತಕ್ಕ ನಾವು) ಇವಾಂ ಈ ವಾ ಚಂ=ನಮ್ಮ ಈ ಮಾತನ್ನು, ಪ್ರತಿಹರ್ಯಥ=(ಹರ್ಯಗ್ಲ ಮೇ ಗತೌ) ಸತ್ಯವಾಗಿ ಸ್ವೀಕರಿಸಿರಿ. ವಃ=ನಿಮ್ಮ ಪ್ರಸಾದದಿಂದ, ವಿಶ್ವಾ ಇತ್=ಎಲ್ಲಾ,ವಾಮಾ=ಮಂಗಲಗಳನ್ನು, ಅಶವತ್=(ಅಶಭೋಜನೇ) ನಾನು ಹೊಂದಿರುತ್ತೇನೆ. ॥ ೬ ॥

ಭಾ ॥ ಯದ್ವಾಚ್ಯಾ ದೇವತಾಸ್ತು ತಾಃ । ತಮೇವ ಮಂತ್ರಂ ವೋಚೇಮ ಜ್ಞಾನಾರ್ಥಂ ಸುಖಕಾರಣಂ (೨) ಇವಾಂ ವಾಚಂ ಸ್ವೀಕುರುತ ಸತ್ಯಾದ್ಯೋಽಖಿಲಂ ಶುಭಂ । ಅಶ್ನವಾನಿ ॥ ೬ ॥

ಅ ॥ (೧) ಇಂದ್ರ ಮೊದಲಾದ ಆ ದೇವತೆಗಳಾದರೂ ಯಾವ ಮಂತ್ರದಿಂದ ವಾಚ್ಯರಾಗಿರುತ್ತಾರೋ, ಸುಖಕಾರಣವಾದ ಆ ಮಂತ್ರವನ್ನೇ. ಜ್ಞಾನಕ್ಕಾಗಿ ಜಪಿಸುತ್ತೇವೆ. (೨) ನಮ್ಮ ಈ ಮಾತನ್ನು ಸತ್ಯವನ್ನಾಗಿ ಸ್ವೀಕರಿಸಿ, ನಿಮ್ಮ ಅನುಗ್ರಹದಿಂದ ಎಲ್ಲಾ ಶುಭವನ್ನು ಉಣ್ಣುವೆವು. (ಹೊಂದುವೆವು) ॥ ೬ ॥

ಋ ॥ (೪೮೮) ಕೋ ದೇವಯಂತಮಶ್ನವಜ್ಜನಂ ಕೋ ವೃಕ್ತಬರ್ಹಿಷಂ । ಪ್ರಪ್ರ ದಾಶ್ವಾನ್ ಪಸ್ತ್ಯಾಭಿರಸ್ಥಿತಾಂತರ್ವಾವತ್ಕ್ಷಯಂ ದಧೇ ॥ ೭ ॥

ಅ ॥ ದೇವಾಃ=ದೇವತೆಗಳಿರಾ, ದೇವಯಂತಂ=(ದೇವಾನ್ ಯಾತಿ ಭಜತೀ, ದೇವಪೂರ್ವಕ ಯಾ ಪ್ರಾಪಣೇ ದೇವತೆಗಳ ಭಕ್ತನಾದ,(ನಿಮ್ಮ ಭಕ್ತನಾದ) ಜನಂ=ಜನರನ್ನು,ಕಃ=ಯಾವನು,ಅಶ್ನವತ್=(ಅಶ ಭೋಜನೇ ಹೊಂದಿಯಾನು. (ಮತ್ತು ನಿಮ್ಮನ್ನುದ್ದೇಶಿಸಿ, ವೃಕ್ತ ಬರ್ಹಿಷಂ=(ವೃಜೀ ಸಂಪರ್ಕೇ, ವೃಕ್ತಂ=ಸಂಬದ್ಧವಾದ ಆಸ್ತೃತವಾದ, ಬರ್ಹಿಸ್ಸುಳ್ಳ,) ಬರ್ಹಿಸ್ಸನ್ನು ವಿಸ್ತರಿಸುವ ಯಜಮಾನನನ್ನಾಗಲೀ, ಕಃ ಯಾವನು? ಅಶ್ನವತ್ ಹೊಂದಿಯಾನು (ಅಂತಹ ದೇವ ಭಕ್ತನಾಗಿರುವ ಯಜಮಾನನು ಅತಿ ದುರ್ಲಭನು.) (ಅಂತಹ ಯಜಮಾನನು ದುರ್ಲಭನೆಂದುಮಾತ್ರವಲ್ಲ. ಮತ್ತೆ) ದಾಶ್ವಾನ್=(ದಾಶೃ ದಾನೇ) ಯಜಮಾನನು, ಪಸ್ತ್ಯಾಭಿಃ=ಸುಖಗಳಿಂದ ಯುಕ್ತನಾಗಿಯೇ, ಪ್ರಪ್ರಾಸ್ಥಿತ(ಷ್ಠಾ ಗತಿ ನಿವೃತ್ತೌ) ಆವಾವ ತಮ್ಮ ಇಷ್ಟ ಸ್ಥಾನಗಳಲ್ಲಿಯೇ ಚೆನ್ನಾಗಿ ಇರುತ್ತಾನೆ. ದಾಶ್ವಾನ್=ಜ್ಞಾನ ಪೂರ್ವಕವಾಗಿ ಹವಿರಾದಿಗಳನ್ನು ಕೊಡುವವನು, ಅಂತರ್ವಾವತ್ ಕ್ಷಯಂ=(ಅಂತ ರುಪಕದಾತ್ ವಾಗತಿ ಗಂಧನಯೋಃ) ಸಮಸ್ತ ವಸ್ತುಗಳೊಳಗೆ, ನಿಯಾಮಕನಾಗಿರುವುದರಿಂದ, ಅಂತರ್ವಾ= ಶ್ರೀ ವಿಷ್ಣುವು,) ವಿಷ್ಣು ಸಾಧೃಶ್ಯದಿಂದಯುಕ್ತವಾದ ಸ್ಥಾನವನ್ನು,ಅಥವಾ ಶ್ರೀ ವಿಷ್ಣುವೇಸ್ವಾಮಿಯಾಗಿರುವುದರಿಂದ ಯುಕ್ತವಾದ ಸ್ಥಾನವನ್ನು, ದಧೇ= ಹೊಂದುತ್ತಾನೆ. (ಸರ್ವ ವ್ಯಾಪಿಯು ಆಗುತ್ತಾನೆ.) ॥ ೭ ॥

ಭಾ (೧)ಅತಿ ದೌರ್ಲಭ್ಯಾದ್ದೇವ ಭಕ್ತಂ ಕ ಆಪ್ನುಯಾತ್।ಯಜಮಾನಂ ವಾಽನು ಗಚ್ಛೇತ್ಕಃ ಸಮ್ಯಕ್‌ಸ್ತೃತಬರ್ಹಿಷಂ ॥ (೨) ತತ್ರ ತತ್ರ ಪ್ರಸ್ಥಿತೋಽಸೌ ಯಜಮಾನಃ ಸುಖೈಃ

ಸ್ವಯಂ। ಸ್ವೇಷ್ಟ ಸ್ಥಾನೇಷು (೩) ಚಾಂತರ್ವಾ ವಿಷ್ಣುರಂತರ್ಗತೋ ಯತಃ। ತದ್ವ
ಶ್ಯೇನ ಸ್ವಯಂ ಸ್ಥಾನಂ ಪ್ರಾಪ್ನೋತಿ ಜ್ಞಾನತೋ ಯಜನ್ ॥ ೭ ॥

ಅ ॥ (೧) ನಿಮ್ಮ ಭಕ್ತರಾದ ಜನರನ್ನು ಯಾರು ಹೊಂದುವರು. ಸಮ್ಯಕ್ ಜ್ಞಾನಾದಿ ಪೂರ್ವಕವಾಗಿ ಬರ್ಹಿಸ್ಸನ್ನೂ ವಿಸ್ತರಿಸಿಕೊಂಡಿರುವ ಯಜಮಾನನನ್ನಾಗಲೀ ಯಾವನು ಹೊಂದುವನು. (ಯಾವನೂ ಹೊಂದ ಲಾರನು.) (ನಿನ್ನ ಭಕ್ತ ಯಜಮಾನರು ಅಪ್ರಾಪ್ಯರು ಯಾವುದರಿಂದ ಎಂದರೆ.) ಅತಿಶಯವಾಗಿ ದುರ್ಲಭ ನಾಗಿರುವುದರಿಂದ. (೨) (ದುರ್ಲಭನು ಮಾತ್ರವಲ್ಲ. ಮತ್ತೆ) (ಈ ಯಜಮಾನನು ಪರಾಪೇಕ್ಷೆ ಇಲ್ಲದೇನೇ ಸುಖಗಳಿಂದ ಯುಕ್ತನಾಗಿಯೇ ಅವಾವ ತಮ್ಮ ಇಷ್ಟ ಸ್ಥಾನಗಳಲ್ಲಿಯೇ, ಚೆನ್ನಾಗಿ ನಿಲ್ಲುವವನಾಗುತ್ತಾನೆ. (೩) ಯಜಮಾನನು ಜ್ಞಾನ ಪೂರ್ವಕವಾಗಿ ಹವಿರಾದಿಗಳನ್ನು ಕೊಡುವವನು, ವಿಷ್ಣುವೇ ಸ್ವಾಮಿಯಾಗಿ ಉಳ್ಳ ಸ್ಥಾನವನ್ನು ಹೊಂದುತ್ತಾನೆ. ಶ್ರೀ ವಿಷ್ಣುವು ಯಾವ ಕಾರಣದಿಂದ ಸಮಸ್ತ ವಸ್ತುಗಳ ಒಳಗೆ ನಿಯಾಮಕ ನಾಗಿರುತ್ತಾನೋ, ಅದೇ ಕಾರಣ ಶ್ರೀ ವಿಷ್ಣುವು ಅಂತರ್ವಾ=ಎನಿಸುತ್ತಾನೆ. ವಿಷ್ಣು ಸಾದೃಶ್ಯದಿಂದ ಯುಕ್ತ ನಾಗ ಸ್ಥಾನವನ್ನು ಹೊಂದುತ್ತಾನೆ. (ಅಂತರ್ವಾವತ್ ಎಂಬಲ್ಲಿ ಪ್ರಕಾರಾಂತರವನ್ನು ಹೇಳುತ್ತಾರೆ) (ಅಂತರ್ವಾ ಅಸ್ಯಾಸ್ತೀತಿ ಅಂತರ್ವಾವತ್.) ಶ್ರೀ ವಿಷ್ಣುವೇ ಸ್ವಾಮಿಯಾಗಿರುವುದರಿಂದ ಅಂತರ್ವಾವತ್, ಅಂದರೆ, ವಿಷ್ಣುವೇ ಸ್ವಾಮಿಯಾಗಿ ಉಳ್ಳ ಸ್ಥಾನವನ್ನು ಹೊಂದುತ್ತಾನೆ. (ಸರ್ವವ್ಯಾಪಿಯಾಗಿರುತ್ತಾನೆ.) ॥ ೭ ॥

ಋ ॥ (೪೮೯) ಉಪ ಕ್ಷತ್ರಂ ಪೃಂಚೀತ ಹಂತಿ ರಾಜಭಿರ್ಭಯೇ ಚಿತ್ಸು
ಕ್ಷಿತಿಂ ದಧೇ। ನಾಸ್ಯ ವರ್ತಾ ನ ತರುತಾ ಮಹಾಧನೇ ನಾರ್ಭೇ
ಅಸ್ತಿ ವಜ್ರಿಣಃ ॥ ೮ ॥ ॥ ೨೧ ॥ ೪೦ ॥

ಅ॥ (ಆನೇ ಋಕ್ಕಿಗೆ ಇಂದ್ರನು ದೇವತೆಯು.) (ಆ ಜನಾರ್ದನನು,) ಕ್ಷತ್ರಮುಪ ಪೃಂಚೀತ= (ಪೃಚೀ ಸಂಪರ್ಕೇ) ಕ್ಷತ್ರಿಯರಾದ ಮನುಷ್ಯಾದಿಗಳಿಂದ ಸಂಬದ್ಧನಾಗುತ್ತಾನೆ. (ಅಂದರೆ ಮನುಷ್ಯಾದಿಗಳಲ್ಲಿ ಆವೇಶ ಮಾಡಿ ಅವರಿಂದ ಮಿಶ್ರನಾಗುತ್ತಾನೆ.) ಅವರಲ್ಲಿ ಅವಿಷ್ಟನಾದ ಶ್ರೀ ಹರಿಯು ಆ ರಾಜರಿಂದ) ಹಂತಿ= (ಶತ್ರುಗಳನ್ನು) ಸಂಹರಿಸುತ್ತಾನೆ. ಭಯೇಚಿತ್= (ಭಕ್ತರಿಗೆ) ಭಯವು ಪ್ರಾಪ್ತವಾದಾಗ, ಸುಕ್ಷಿತಿಂ= ಕ್ಷಿನಿವಾಸಗತ್ಯೋಃ, ಶೋಭನವಾದ ಆಶ್ರಯವನ್ನು ಭಯನಿವಾರಣವನ್ನು ದಧೇ= ಕೊ(ಮಾ)ಡುತ್ತಾನೆ. ಅಸ್ಯ ವಜ್ರಿಣಃ= ಇಂದ್ರನಿಗೆ) ಮಹಾಧನೇ= ಯುದ್ಧಾಖ್ಯ ಮಹಾಧನವಿಷಯದಲ್ಲಿ, ವರ್ತಾ= (ವೃಞು ವರ್ತನೇ) ಇದಿರು ಹೋಗುವವನು, (ಸ ಯುದ್ಧ ಮಾಡುವವನು ನ=ಎಲ್ಲಿಯೂ ಇಲ್ಲವೇ ಇಲ್ಲ. ತರುತಾ= (ತೃ ಪ್ಲವನ ತರಣಯೋಃ, ಗೆಲ್ಲುವವ ನಾಗಲೀ, ನ= ಇಲ್ಲವೇ ಇಲ್ಲ (ಹೀಗೆಯೇ) ಅರ್ಭೇ= ಅಲ್ಪಧನದಲ್ಲಿ, ಪ್ರಸಿದ್ಧವಾದ ವಿತ್ತ ರೂಪವಾದ ಧನ ವಿಷಯದಲ್ಲಿ, ವರ್ತಾ ತರುತಾ ವಾ= ಇದಿರು ಯುದ್ಧ ಮಾಡುವವನು, ಗೆಲ್ಲುವವನಾಗಲೀ, ನ= ಇಲ್ಲವೇ ಇಲ್ಲ.
॥ ೮ ॥ ೧೨ ॥ ೪೦ ॥

ಭಾ॥ (೧) ಉಪಪೃಕ್ತಃ ಕ್ಷತ್ರಿಯೈಸ್ಸ ಆವೇಶೇನ ಜನಾರ್ದನಃ (೨) ಹಂತಿ ಶತ್ರೂಂಶ್ಚತೈ
ರ್ದೇವೋ ಭಯೇ ಚ ಸ್ವಾಶ್ರಯಂ ದದೌ॥ (೩) ವರ್ತಾಽಭಿಗಂತಾ ತರುತಾ ಜೇತಾ
ಚಾಸ್ಯ ನ ಹಿ ಕ್ವಚಿತ್। (೪) ಯುದ್ಧಂ ಮಹಾಧನಂ ತ್ವರ್ಭಂ ಪ್ರಸಿದ್ಧಂ ಧನಮೇವ ಹಿ
॥ ೮ ॥ ೨೧ ॥ ೮ ॥

ಶ್ಲೋ॥ (೧) ಈ ಜನಾರ್ದನನು ಕ್ಷತ್ರಿಯರಿಂದ ಸಂಬದ್ಧನಾದನು.(ಎಂದರೆ ಅವರಲ್ಲಿ ಪ್ರವೇಶ ಮಾಡಿ ಮಿತ್ರನಾದನು. (೨) ರಾಜರಿಂದ ಶತ್ರುಗಳನ್ನು ಸಂಹರಿಸುತ್ತಾನೆ. ಭಕ್ತರಿಗೆ, ಭಯವು ಪ್ರಾಪ್ತವಾದಾಗ ಭಯ ನಿವಾರಣವನ್ನು ಕೊಟ್ಟನು. ಮಾಡಿದನು.(೬) ಯಾವನು ಇದಿರಾಗಿ ಹೋಗುತ್ತಾನೋ ಆತನು ವರ್ತೃ ಎನಿಸುತ್ತಾನೆ. ಯಾವನು ಅತಿಕ್ರಮಿಸುತ್ತಾನೋ ಗೆಲ್ಲುತ್ತಾನೋ,ಅವನ ತರುತಾ ಎನಿಸುತ್ತಾನೆ ಈ ಇಂದ್ರನ ಇದಿರು ಯುದ್ಧ ಮಾಡುವವನು ಗೆಲ್ಲುವವನಾಗಲೀ ಎಲ್ಲಿಯೂ ಇಲ್ಲನೆ: ಇಲ್ಲ. (೪) (ಮಹಾಧನ ವಿಷಯದಲ್ಲಿ ಆಗಲೀ ಅಲ್ಪ ಧನ ವಿಷಯದಲ್ಲಿ ಆಗಲೀ ಯಾವನೊಬ್ಬನೂ ಇಲ್ಲವೇ ಇಲ್ಲ ಮಹಾಧನ ಯಾವುದು, ಅಲ್ಪಧನವು ಯಾವುದೆಂದರೆ) ಪೃಥನ ಶಬ್ದ ಪರ್ಯಾಯವು ಮಹಾ ಧನ ಶಬ್ದವು. ಅರ್ಭ ಶಬ್ದವು ಅಲ್ಪವಾಚಕವು, ಕ್ಷತ್ರಿಯರಿಗೆ)ಯುದ್ಧವು ಮಹಾಧನವು ಪ್ರಸಿದ್ಧ ಧನವು ಯುದ್ಧಕ್ಕಿಂತ ಅಲ್ಪ ಧನವೇ ಆಗಿದೆ. ಎಂದು ಹಿ ಶಬ್ದಾರ್ಥವು, ಅಥವಾ ಶಂ ತಕ್ಷಂತಿ ಇದು ಮೊದಲಾದ ಮೇಲಿನ ಮಂತ್ರಭಾಗವನ್ನು ಏಕೆ ವ್ಯಾಖ್ಯಾನ ಮಾಡಲಿಲ್ಲ ಎಂದರೆ. ಘಂಟು ವ್ಯಾಕರಣ ಮೊದಲಾದ ಈ ಮಾರ್ಗದಿಂದಲೇ ಮೇಲಿನ ಮಂತ್ರಗಳ ಸಮುದಾಯವನ್ನು ವ್ಯಾಖ್ಯಾನ ಮಾಡುವುದು ಸುಲಭವಾಗಿದೆ ಎಂಬ ಅಭಿಪ್ರಾಯದಿಂದ ಇಲ್ಲಿ ಉಪರಮ ಮಾಡುತ್ತೇವೆ, ಎಂದು ಹಿ ಶಬ್ದದಿಂದ ಶ್ರೀಮದಾಚಾರ್ಯರು ಹೇಳಿರುವರು: ॥ ೮ ॥ ೨೧ ॥ ೮ ॥

ವಿ॥ (1) ಈ ಗ್ರಂಥದ ಆದಿಯಲ್ಲಿ ಅತಿಶುಭ್ರಿಕರಂ ಎಂದೂ ಅಂತ್ಯದಲ್ಲಿ ಪ್ರಸಿದ್ಧಂ ಧನಮೇವ ಹಿ ಎಂದೂ ಹೇಳಿದ ಪ್ರಯುಕ್ತ ಈ ಗ್ರಂಥವು ಶ್ರೀ ಪರಮಾತ್ಮನಿಗೆ ಅತಿ ಪ್ರೀತಿಕರವಾದುದು. ಈ ಗ್ರಂಥವನ್ನು ಧ್ಯಯನ ಮಾಡುವವರಿಗೆ ಐಹಿಕಾಮುಷ್ಮಿಕ ನಿಖಿಲಪುರುಷಾರ್ಥಗಳೂ ಸಿಗುತ್ತವೆ ಎಂದುಕ್ತವಾಯಿತು. ಹೇಗೆಂದರೆ—ಈ ಅಂತಿಮ ಋಕ್ಕಿನ ಪೂರ್ವಾರ್ಧದಿಂದ ಶ್ರೀಭಗವಂತನ ಅನುಗ್ರಹದಿಂದ ಭಕ್ತರ ಸಕಲ ಅನಿಷ್ಟ ನಿವೃತ್ತಿಗಳಾಗುತ್ತವೆ ಎಂದೂ, ಉತ್ತರಾರ್ಧದಿಂದ ಸಮಸ್ತ ಅಭೀಷ್ಟಗಳು ಸಿದ್ಧಿಸುತ್ತವೆ ಎಂದೂ ಪ್ರತಿಪಾದಿಸುತ್ತಾ ಶ್ರೀಮಧ್ವಾಚಾರ್ಯರು ಮಂತ್ರವ್ಯಾಖ್ಯಾನದಿಂದಲೇ ಗ್ರಂಥವನ್ನು ಸಮಾಪ್ತಿಸಿರುವರು. (2) ಶ್ರೀಮದಾಚಾರ್ಯರು ತಾನುಮಾಡಿದ ಬ್ರಹ್ಮಸೂತ್ರ ಭಾಷ್ಯ ಮೊದಲಾದ ಇತರ ಎಲ್ಲಾ ಗ್ರಂಥ ಗಳಲ್ಲಿ ಯಸ್ಯತ್ರೀಣ್ಯುದಿತಾನಿ ಇತ್ಯಾದಿಗಳಿಂದ ತಮ್ಮ ಮಾಹಾತ್ಮ್ಯ ಪ್ರತಿಪಾದನ ಪರವಾದ ಬಳಿತ್ಥಾ ತದ್ವಪುಷೇ ಇದು ಮೊದಲಾದ ಮಂತ್ರಗಳ ಅರ್ಥ ಸಂಗ್ರಹವನ್ನು ಹೇಳಿ ಅಷ್ಟರಿಂದಲೇ ಸಮಾಪ್ತಿಯನ್ನು ಮಾಡಿಸದೆ ಅಂತ್ಯದಲ್ಲಿಯೂ ಭಗವಂತನ ನಮನ ಸ್ತುತ್ಯಾದಿಗಳನ್ನು ಹೇಳಿ ಸಮಾಪ್ತಿಗೊಳಿಸಿರುವರೋ,ಹಾಗೆ ಈ ಗ್ರಂಥದಲ್ಲಿ ತಮ್ಮ ಮಹಿಮೆಯನ್ನು ಪ್ರತಿಪಾದಿಸುವ ಮಾರುತಸೂಕ್ತ ವ್ಯಾಖ್ಯಾನದಿಂದಲೇ ಗ್ರಂಥ ಸಮಾಪ್ತಿ ಮಾಡಲಿಕ್ಕೆ ಇಚ್ಛಿಸದೆ ಶ್ರೀಲಕ್ಷ್ಮೀಪತಿಯಾದ ಶ್ರೀಹನುಮಂತಯಣನೇ ಬ್ರಹ್ಮರುದ್ರಾದಿ ನಿಖಿಲದೇವತೆಗಳಿಂದಲೂ ಉತ್ತಮನು, ಆತನಿಗೆ ಸಮಾನರು ಯಾವನೊಬ್ಬನೂ ಇಲ್ಲವೇ ಇಲ್ಲ. ಆತನೇ ಬ್ರಹ್ಮರುದ್ರಾದಿ ದೇವತೆಗಳ ಸೃಷ್ಟಿಸ್ಥಿತ್ಯಾದಿಗಳನ್ನು ಮಾಡುವವನು. ಸಮಸ್ತ ವೇದಶಾಸ್ತ್ರಗಳಿಂದ ಮುಖ್ಯತಃ ಪ್ರತಿಪಾದ್ಯನು, ಸರ್ವೇಂದ್ರಿಯಗಳಿಗೆ ಪ್ರೇರಕನು, ಸರ್ವವ್ಯಾಪ್ತನು, ಭಕ್ತರಿಗೆ ಮೋಕ್ಷಾದಿ ಪುರುಷಾರ್ಥಗಳನ್ನು ಕೊಡುವವನು, ಇತ್ಯಾದ್ಯರ್ಥಗಳನ್ನು ಪ್ರತಿಪಾದಿಸುವ, ಸೂಕ್ತವನ್ನು ಅಂತ್ಯದಲ್ಲಿ ವ್ಯಾಖ್ಯಾನಮಾಡಿಯೇ ಗ್ರಂಥವನ್ನು ಸಮಾಪ್ತಿಗೊಳಿಸಿದರು (3) ಏವಂಚ ಶ್ರೀಮದಾಚಾರ್ಯರು ಶ್ರೀಋಗ್ವೇದ ಸಂಹಿತೆಯ ಪ್ರಥಮಾಷ್ಟಕದಲ್ಲಿ ೩ನೇ ಅಧ್ಯಾಯದಲ್ಲಿ ೨೧ ವರ್ಗ ಅಂದರೆ ಪ್ರಥಮ ಮಂಡಲದಲ್ಲಿ ೮ನೇ ಅನುವಾಕ ೪೦ ಸೂಕ್ತದವರೆಗೇ ವ್ಯಾಖ್ಯಾನ ಮಾಡಿರುವರು (4) ತ್ರಿಧಾಭಾಷ್ಯಂ ಯೋ ನ ಜಾನಾತಿ ದೀಕ್ಷಿತೋಽಪಿ ಶತಮೋಽವಕಾ ವ್ಯತ್ಯಾಸಾದೀನ್ ಸಪ್ತ ಭೇದಾನ್ ವೇದಾದ್ಯರ್ಥಂ ತು ಯೋ ವದೇತ್। ಸ ಯಾತಿ ನಿರಯಂ ಘೋರಮನ್ಯಥಾಜ್ಞಾನಸಂಭವಂ ಯಾವನು ಗುಹ್ಯ,ಸಮಾಧಿ ದರ್ಶನ ಎಂಬ ೩ ಭಾಷೆಗಳನ್ನು ವೈದರ್ಭೀರೀತಿ ಮೊದಲಾದ ೧೦೦ ವ್ಯಾಖ್ಯಾನ ಪ್ರಕಾರ ವಿಶೇಷಗಳನ್ನು ವ್ಯತ್ಯಾಸ, ಪ್ರಾತಿಲೋಮ್ಯ, ಗೋಮೂತ್ರೀ ಪ್ರಘಸ ಉಷ್ಣಿಕ, ಸುಧರ, ಸಾಧು ಎಂಬ ೭ ಭೇದಗಳನ್ನೂ ತಿಳಿಯದ ವೇದಾದಿಗಳ ಅರ್ಥಗಳನ್ನು ಹೇಳುವನೋ, ಆತನು ವಿಪರೀತ ಜ್ಞಾನಪ್ರಯುಕ್ತ ನರಕಾದ್ಯನರ್ಥವನ್ನು ಹೊಂದುತ್ತಾನೆ, ಎಂದು ವೇದವ್ಯಾಸರು ಮಾಡಿದ ಲಕ್ಷಣ ಶಾಸ್ತ್ರದಲ್ಲಿ ಹೇಳಿದೆ, ಆದ

ಕಾರಣ ಭಾಷಾತ್ರಯ ೧೦೦ ರೀತಿ ಇತ್ಯಾದಿಗಳ ಲಕ್ಷಣಗಳನ್ನು ಪ್ರತಿಪಾದಿಸುವ ಗ್ರಂಥಗಳನ್ನು, ಸತ್ಯಂ ಸತ್ಯಂ ಪುನಸ್ಸತ್ಯಂ। ನ ಹಿ ವಿಷ್ಣೋಃ ಪ್ರಮಾಣಂ ಕಸ್ಮಿಂಶ್ಚಿದ್ವಿಬುಧಾಯತು ಇದು ಮೊದಲಾದ ನಿರ್ಣಯ ಗ್ರಂಥಗಳನ್ನು ಅನುಸರಿಸಿಕೊಂಡೇ ನಿಗಮ, ನಿರುಕ್ತ, ವ್ಯಾಕರಣ, ನಿಘಂಟು ಮೊದಲಾದ ಮಾರ್ಗದಿಂದಲೇ ಮಂತ್ರಗಳ ಸಮುದಾಯವನ್ನು ವ್ಯಾಖ್ಯಾನ ಮಾಡಬೇಕೆಂಬ ಅಭಿಪ್ರಾಯದಿಂದ ಶ್ರೀಮನ್ಮಧ್ವಾಚಾರ್ಯರು ಮುಂದಿನ ಋಕ್ಕುಗಳನ್ನು ತಾವು ವ್ಯಾಖ್ಯಾನ ಮಾಡದೆ ಇಲ್ಲಿಯೇ ಅವಸಾನ ಮಾಡಿರುತ್ತಾರೆ.

ಇತಿ ಶ್ರೀಮದಾನಂದತೀರ್ಥಭಗವತ್ಪಾದಕೃತಂ ಶ್ರೀಮದೃಗ್ಭಾಷ್ಯಂ ಸಂಪೂರ್ಣಂ
ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರು ವಿರಚಿಸಿರುವ ಋಗ್ಭಾಷ್ಯವು ಸಂಪೂರ್ಣವಾಯಿತು.

ಕಲ್ಯಾಣಗುಣಪೂರ್ಣಾಯ ದೋಷದೂರಾಯ ವಿಷ್ಣವೇ ।
ಅನಂತಾಮ್ನಾಯ ವೇದ್ಯಾಯ ಶ್ರೀಪ್ರಾಣಪತಯೇ ನಮಃ ॥

ದೇವತಾಃ ಕಂಚುಕಾಯಂತೇ ವೇದೋ ಬಂದಿಜನಾಯತೇ।
ಯಸ್ಯ ತಸ್ಮಿನ್ಪ್ರಮಾನಥೇ ಸಂದೃಢಾ ಪ್ರೀತಿರಸ್ತು ಮೇ ॥

ಶ್ರೀಮನ್ಮಧ್ವಮುನೇಃ ಕೃತೀಃ ಪ್ರಥಯತಾ ಭಾಷಾಮಯ ವ್ಯಾಖ್ಯಯಾ
ಋಗ್ಭಾಷ್ಯಸ್ಯ ಚ ಸಾಂತತಃ ಶುಭಹಿತಾ ಮಂತ್ರಾರ್ಥ ಸನ್ಮಂಜರೀಂ ।
ಮೂಲೀಕೃತ್ಯ ತದೀಯಭಾಷ್ಯ ವಿವೃತಿಂ ಟೀಕಾಪ್ರಕಾಶಂ
ತಥಾ ಶ್ರೀ ನಾರಾಯಣ ತಂತ್ರಿಣಾ ವಿರಚಿತಾ ಸಚ್ಛ್ರೇಯಸೇ ಕಲ್ಪತಾಂ ॥
ನಮೋಽಸ್ತು ಹರಯೇ ಯುಕ್ತಿಗಿರಯೇ ಸರ್ಜಿತಾರಯೇ ।
ಸಮಸ್ತಗುರವೇ ಕಲ್ಪತರವೇ ಪಂಮದಿನಾಂ ॥
ಹಯಗ್ರೀವಾಯ ದೇವಾಯ ಜ್ವಲದ್ವಾಹಾಯ ದುಹೃದಾಂ ।
ತ್ರಯೀಗಾಗೇಯಾಯ ನಿವರ್ಣಾಯಜನಧ್ಯೇಯಾಯ ತೇ ನಮಃ ॥
ವ್ಯಾಸಂ ಶುಭಗುಣಾವಾಸಂ ಶ್ರೀಶಂ ನೌಮಿ ಸತಾಂ ವಶಂ ।
ಯೋಽಕಂಕೋ ಮಾಂ ಸುಧೃಲ್ಲೀಕಂ ದಾಸಂ ದರ್ಶಯತೀದೃಶಂ ॥
ಸನ್ಮುಖ್ಯಗತಯೇ ಶ್ಲಾಘ್ಯಕೃತಯೇ ವೀತಭೀಯೇ ।
ಸ್ವರ್ಗಗ್ನಿಪತಯೇ ಪೂರ್ಣಮತಯೇ ಯತಯೇ ನಮಃ ॥
ಅನಯಾ ಸೇವಯಾ ಶ್ರೀಶಃ ಪ್ರೀಯತಾಂ ಮೇ ಹಯಾನನಃ ।
ಹರಿಭಕ್ತಾಗ್ರಣೀರ್ಮಧ್ವೋ ಗುರುಶ್ಚ ಪ್ರೀಯತಾಂ ಮಮ ॥

॥ ಶ್ರೀಃ ॥ ॥ ಶ್ರೀಃ ॥